# ಶಾಲೆಗಳಲ್ಲಿ ಭಾಷಾ ಕಲಿಕೆಯ ಸಾಧ್ಯತೆಗಳು: ಕನ್ನಡ ಆತ್ಮಕಥೆಗಳು ಕಂಡಂತೆ

ಭಾಷಾ ಕಲಿಕೆಯೆಂಬುದು ನಿರಂತರ ಪ್ರಕ್ರಿಯೆ. ಶಾಲೆಯಲ್ಲಿ ಇದನ್ನು ಔಪಚಾರಿಕವಾಗಿ ನಿರ್ವಹಿಸಲಾಗುತ್ತದೆ. ಶಾಲೆಗೆ ಬರುವ ಪೂರ್ವದಲ್ಲಿಯೂ, ನಂತರದಲ್ಲಿಯು ಭಾಷಾ ಕಲಿಕೆಯು ನಿರಂತರವಾಗಿ ನಡೆಯುತ್ತಿರುತ್ತದೆ. ಆದರೆ ಭಾಷಾ ಕಲಿಕೆ ಕುರಿತಂತೆ ಶಿಕ್ಷಕರು ಮತ್ತು ಸಮುದಾಯದ ಅರ್ಥೈಸುವಿಕೆ ಹೇಗಿದೆ? ಕನ್ನಡದ ಆತ್ಮಕಥನಗಳನ್ನು ಆಕರವಾಗಿಟ್ಟುಕೊಂಡು ಭಾಷಾ ಕಲಿಕೆಯ ಬಗ್ಗೆ ಸಮಾಜದಲ್ಲಿ ನೆಲೆಗೊಂಡಿರುವ ಮನೋಭಾವನೆ, ನಂಬಿಕೆಗಳು ಮತ್ತು ಅವುಗಳ ಹಿಂದಿನ ಕಾರಣಗಳ ಅಧ್ಯಯನ ಹಾಗೂ ಪರಿಶೋಧನೆಯನ್ನು ಇಲ್ಲಿ ನಡೆಸಲಾಗಿದೆ.

ಭಾರತಕ್ಕೆ ಸ್ವಾತಂತ್ರ್ಯ ದೊರಕಿದ ಬಳಿಕ, ಕರ್ನಾಟಕದ ಏಕೀಕರಣದ ನಂತರ ನಮ್ಮ ನಾಡಿನ ಶಾಲಾ ಶಿಕ್ಷಣಕ್ಕೆ ಸಂಬಂಧಿಸಿದಂತೆ ನೀತಿ ನಿಯಮಾವಳಿಗಳನ್ನು ನಿರೂಪಿಸುವ ಸಂದರ್ಭದಲ್ಲಿ ಪ್ರಮುಖವಾಗಿ ಎರಡು ಪ್ರಶ್ನೆಗಳು ಮುನ್ನೆಲೆಗೆ ಬರುತ್ತವೆ. ಕರ್ನಾಟಕದ ಶಾಲಾ ಶಿಕ್ಷಣದ ಮಾಧ್ಯಮ ಯಾವುದಾಗಿರಬೇಕು? ಶಾಲಾ ಶಿಕ್ಷಣದ ಸಂದರ್ಭದಲ್ಲಿ, ಪಠ್ಯಕ್ರಮದಲ್ಲಿ ಯಾವ ಯಾವ ಭಾಷೆಗಳ ಅಧ್ಯಯನಕ್ಕೆ ಅವಕಾಶವಿರಬೇಕು? ಈ ಎರಡು ಪ್ರಶ್ನೆಗಳಿಗೆ ಉತ್ತರವನ್ನು ಪಡೆಯುವುದು ಸರಳವಾಗಿಲ್ಲ. ಈಗಲಂತೂ ಪ್ರಪಂಚವೇ ಒಂದು ಗ್ರಾಮವಾಗಿ (global village) ಪರಿವರ್ತನೆ ಹೊಂದುತ್ತಿರುವ ಸಂದರ್ಭದಲ್ಲಿ ಈ ಪ್ರಶ್ನೆಗಳಿಗೆ ಖಚಿತವಾದ ಉತ್ತರವನ್ನು ಕಂಡುಕೊಳ್ಳುವುದು ಇನ್ನಷ್ಟು ಸಂಕೀರ್ಣವಾಗುತ್ತಿದೆ. ಇಂಗ್ಲಿಷ್ ಕಲಿಯದಿದ್ದಲ್ಲಿ ಜಾಗತಿಕ ಮಟ್ಟದಲ್ಲಿ ಸಾಧನೆಗೆ ತೊಡಕಾಗುತ್ತದೆ ಎಂಬ ವಾದ ಒಂದೆಡೆ. ನಾಡು - ಸಂಸ್ಕೃತಿಯ ಉಳಿವು ಮತ್ತು ಉನ್ನತಿಗಾಗಿ ಕನ್ನಡ ಕಲಿಕೆ ಅನಿವಾರ್ಯವೆಂಬ ಸ್ಥಿತಿ ಇನ್ನೊಂದೆಡೆ.

ಶಾಲಾ ಶಿಕ್ಷಣವು ಸಮುದಾಯದ ಬದುಕಿನ ಅಗತ್ಯಗಳಿಗೆ ಹತ್ತಿರವಾಗಿರಬೇಕು. ಜೊತೆಗೆ ವ್ಯಕ್ತಿಗತ ಆಶಯಗಳನ್ನು ಪರಿಣಾಮಕಾರಿಯಾಗಿ ಪೂರ್ಣಗೊಳಿಸುವಷ್ಟು ಸಶಕ್ತವೂ ಆಗಿರಬೇಕು. ಶಿಕ್ಷಣದ ಪ್ರಾಥಮಿಕ ಸಂಗತಿಗಳೆನಿಸಿದ ಮೂರು 'ರ' ಕಾರಗಳನ್ನು (ರೀಡಿಂಗ್, ರೈಟಿಂಗ್ ಹಾಗೂ ಅರಿಥಮೆಟಿಕ್) ವಸಾಹತುಶಾಹಿ ಕಾಲಘಟ್ಟದಲ್ಲಿ ಬೇರೆಯೇ ಆಶಯಗಳೊಂದಿಗೆ ಜಾರಿಗೊಳಿಸಲಾಯಿತು. ಸಮುದಾಯದ ಬದುಕಿನ ಅಗತ್ಯಗಳು ಸಂಕೀರ್ಣವಾಗುತ್ತಾ ಸಾಗಿದಂತೆ ವ್ಯಕ್ತಿಗತ ಆಶಯಗಳು ಕೂಡಾ ವಿಶಿಷ್ಟ ಸವಾಲುಗಳನ್ನು ಸೃಷ್ಟಿಸಿತು.

ತನ್ನ ಮಗು ಯಾವ ಮಾಧ್ಯಮದಲ್ಲಿ ಶಿಕ್ಷಣವನ್ನು ಪಡೆಯಬೇಕು ಎಂಬುದು ಪೋಷಕರ ವಿವೇಚನೆಗೆ ಸಂಬಂಧಪಟ್ಟ ವಿಷಯವಾಗಿದೆ ಎಂಬುದು ದಿನಾಂಕ 6.5.2014ರ ಸರ್ವೋಚ್ಚ ನ್ಯಾಯಾಲಯದ ತೀರ್ಪಿನ (CIVIL

APPEAL Nos. 5166-5190 of 2013) ಸಾರಾಂಶ. ಮಾತೃಭಾಷೆಯಲ್ಲಿ ಶಾಲಾ ಶಿಕ್ಷಣವನ್ನು ಪಡೆಯುವುದರ ಮಹತ್ವವನ್ನು ಪೋಷಕರು ಮನಗಾಣುವಂತೆ ಮಾಡುವ ಸಾಮಾಜಿಕ ಸ್ಥಿತಿಗತಿಗಳನ್ನು ಸೃಷ್ಟಿಸುವುದು ಸಮುದಾಯಕ್ಕೆ ಸವಾಲಿನ ಸಂಗತಿ. ವಿವಿಧ ಸಾಧಕರ ಬಾಲ್ಯದ ಶಿಕ್ಷಣದ ಕುರಿತು ಅವರೇ ದಾಖಲಿಸಿರುವ ಮಾತುಗಳನ್ನು ಅವಲೋಕಿಸಿದಾಗ ಭಾಷಾ ಕಲಿಕೆ, ಪರಿಣಾಮಕಾರಿಯಾದ ಕಲಿಕಾ ಮಾಧ್ಯಮ ಇವುಗಳ ಕುರಿತು ಚಿಂತನ ಮಂಥನಗಳಿಗೆ ಹೊಸ ಹೊಳಹುಗಳು ದೊರಕುತ್ತವೆ. ಈ ನೆಲೆಯಲ್ಲಿ ಆತ್ಮಕಥೆಗಳ ಅಧ್ಯಯನ ತುಂಬ ಪ್ರಮುಖ ಹಾಗೂ ಆಸಕ್ತಿದಾಯಕ ಸಂಗತಿಯಾಗಿದೆ.

ಕನ್ನಡದಲ್ಲಿ 200 ಕ್ಕೂ ಮಿಕ್ಕಿ ಆತ್ಮಕಥನಗಳು ಪ್ರಕಟಗೊಂಡಿವೆ. ಇತರ ಭಾಷೆಗಳ 100ಕ್ಕೂ ಮಿಕ್ಕಿ ಆತ್ಮಕಥೆಗಳು ಕನ್ನಡಕ್ಕೆ ಅನುವಾದಗೊಂಡಿವೆ. ಸಾಹಿತಿಗಳು, ರಾಜಕಾರಣಿಗಳು, ವಿಜ್ಞಾನಿಗಳು, ಉದ್ಯಮಿಗಳು ಹೀಗೆ ವೈವಿಧ್ಯಮಯ ಹಿನ್ನೆಲೆಯುಳ್ಳ ವ್ಯಕ್ತಿಗಳು ಆತ್ಮಕಥೆಗಳನ್ನು ಬರೆದಿದ್ದಾರೆ. ಆತ್ಮಕಥೆಗಳನ್ನು ಇತಿಹಾಸಕ್ಕೆ ಸಾಕ್ಷ್ಯದ ರೂಪದಲ್ಲಿ, ಓದಿಗೆ ಅತ್ಯಂತ ಆಪ್ತತೆಯನ್ನು ಒದಗಿಸುವ ಆಕರವಾಗಿ ಪರಿಗಣಿಸಬಹುದಾಗಿದೆ. ಆತ್ಮಕಥನಕಾರರಲ್ಲಿ ಹೆಚ್ಚಿನೆಲ್ಲರೂ ತಮ್ಮ ಶಾಲಾ ಶಿಕ್ಷಣದ ಕುರಿತು ಹೆಮ್ಮೆಯಿಂದ ಸ್ಮರಿಸಿಕೊಂಡಿದ್ದಾರೆ. ಕೆಲವೇ ಆತ್ಮಕಥನಕಾರರು ತಾವು ಭಾಷೆಯನ್ನು ಕಲಿಯುವಲ್ಲಿ, ಸಾಹಿತ್ಯದಲ್ಲಿ ಆಸಕ್ತಿಯನ್ನು ಹೊಂದುವಲ್ಲಿ ಶಾಲೆಯ ಪಾತ್ರದ ಕುರಿತು ವಿಶ್ಲೇಷಣೆಯನ್ನು ನಡೆಸಿದ್ದಾರೆ. ಒಡನಾಡಿಯ, ಶಿಕ್ಷಕರ, ಪಠ್ಯಕ್ರಮ ಹಾಗೂ ಪರಿಸರದ ಪ್ರಭಾವ ಹೀಗೆ ಹತ್ತಾರು ಅಂಶಗಳು ಭಾಷಾ ಕಲಿಕೆಯಲ್ಲಿ ಆಸಕ್ತಿಯನ್ನು ಮೂಡಿಸುತ್ತವೆ. ಕೆಲವೊಮ್ಮೆ ಶಿಕ್ಷಕರು ನೀಡಿರುವ ಶಿಕ್ಷೆ ಅಥವಾ ವಿದ್ಯಾರ್ಥಿ ಅನುಭವಿಸಬೇಕಾಗಿ ಬಂದ ಅಪಮಾನಗಳೂ ಕೂಡ ಪ್ರಭಾವವನ್ನು ಬೀರಿರುವ ಸಾಧ್ಯತೆಗಳನ್ನು ಆತ್ಮಕಥೆಗಳು ಉದಾಹರಿಸುತ್ತವೆ. ಈ ಎಲ್ಲ ಅಂಶಗಳ ಪರಿಶೀಲನೆಯು ಭಾಷಾ ಕಲಿಕೆಯನ್ನು ಅರ್ಥಪೂರ್ಣಗೊಳಿಸುವಲ್ಲಿ ಶಿಕ್ಷಕರಿಗೆ, ಪಠ್ಯದ ಆಯ್ಕೆಗೆ ಅವಕಾಶಗಳನ್ನು ಕಲ್ಪಿಸುವಲ್ಲಿ ನೀತಿ ನಿರೂಪಕರಿಗೆ ಹೊಸ ಒಳನೋಟಗಳನ್ನು ನೀಡುತ್ತವೆ.

ಇಂದಿನ ವಿದ್ಯಾರ್ಥಿ 'ನಾನು ಕಲಿಯುವ ಕ್ರಮದಲ್ಲಿ ನೀನು ಕಲಿಸಬಲ್ಲೆಯಾ?' ಎಂದು ಕೇಳುತ್ತಿದ್ದಾನೆ. ವಿದ್ಯಾರ್ಥಿಯ ವೈವಿಧ್ಯಮಯ ಹಿನ್ನೆಲೆಯನ್ನು, ಕಲಿಯುವ ಸಾಧ್ಯತೆಗಳನ್ನು ಶಿಕ್ಷಕನು ಅರಿತುಕೊಳ್ಳಬೇಕು. ಬೇರೆ ಬೇರೆ ಕ್ರಮದಲ್ಲಿ ಕಲಿಸುವ ಅಗತ್ಯಗಳನ್ನು ಅರಿತು ಭಾಷಾ ಶಿಕ್ಷಣವನ್ನು ನೀಡಲು ಶಿಕ್ಷಕನ ಬಳಿ ಹಲವಾರು ತಂತ್ರಗಳು, ವಿಧಾನಗಳು ಲಭ್ಯವಿರಬೇಕು. ವಿದ್ಯಾರ್ಥಿಯ ಬೇಡಿಕೆಗಳನ್ನು ಅರಿತು ಪ್ರೀತಿಯಿಂದ ವ್ಯವಹರಿಸುವ

ಸಂವೇದನಾಶೀಲತೆಯನ್ನು ಶಿಕ್ಷಕನಿಂದ ಸಮಾಜವು ನಿರೀಕ್ಷಿಸುತ್ತಿದೆ. ಐತಿಹಾಸಿಕ, ಶೈಕ್ಷಣಿಕ ಹಾಗೂ ಸಾಂಸ್ಕøತಿಕ ನೆಲೆಗಳಲ್ಲಿ ಭಾಷಾ ಬೋಧನೆಯನ್ನು ಪರಿಣಾಮಕಾರಿಯಾಗಿ ನಡೆಸಲು ಶಿಕ್ಷಕನಿಗೆ ಕೂಡಾ ಆತ್ಮಕಥೆಗಳ ಅಧ್ಯಯನ ಸಹಕಾರಿಯಾಗಲಿವೆ. ಕಲಿಕೆಯೆಂಬುದು ಹೇಗೆ ವೈಯಕ್ತಿಕವಾಗಿ ಭಿನ್ನ ನೆಲೆಗಳಲ್ಲಿ ಸಾಧ್ಯವಾಗುತ್ತದೆಯೋ, ಅದೇ ರೀತಿ ಆತ್ಮಕಥೆಗಳು ಕೂಡಾ ವ್ಯಕ್ತಿಗತ ನೆಲೆಗಳಲ್ಲಿ ಕಲಿಕೆಯ ಕ್ರಮವನ್ನು ಹೇಳಿಕೊಳ್ಳುತ್ತವೆ. 'ಕಲಿಕೆಯಲ್ಲಿ ಬಹುತ್ವದ ಸಾಧ್ಯತೆ' ಗಳ ಕುರಿತು ಅರಿವು ಮೂಡಿಸುವಲ್ಲಿ ಆತ್ಮಕಥೆಗಳ ಅಧ್ಯಯನ ಸಹಕಾರಿಯಾಗಲಿದೆ.

**ಮಾತೃಭಾಷೆಯಲ್ಲಿ ಶಿಕ್ಷಣ: ಕಾಲಾನುಕ್ರಮದಲ್ಲಿ ಗಣ್ಯರ ಮಾತುಗಳು**

ಇಂದು ಮಾತೃಭಾಷೆಯಲ್ಲಿ ಶಿಕ್ಷಣದ ಪ್ರಾಮುಖ್ಯತೆಯನ್ನು ಶೈಕ್ಷಣಿಕ ಮನೋವಿಜ್ಞಾನಿಗಳು ಏಕಕಂಠದಲ್ಲಿ ಒಪ್ಪುತ್ತಾರೆ. ಆದರೆ ಈಗಿರುವ ಬಹುಭಾಷಾ ಸಮಾಜದಲ್ಲಿ ಮಾತೃಭಾಷಾ ಶಿಕ್ಷಣವನ್ನು ಒದಗಿಸುವಲ್ಲಿ ಸರಕಾರಗಳಿಗೂ ತಮ್ಮದೇ ಆದ ತೊಡಕುಗಳು ಇವೆ. ಭಾಷಾವಾರು ಪ್ರಾಂತ್ಯಗಳ ರಚನೆಯಾದ ಬಳಿಕ ಪ್ರಾದೇಶಿಕ ಭಾಷಾ ಮಾಧ್ಯಮದಲ್ಲಿ ಶಿಕ್ಷಣವನ್ನು ನೀಡುವ ಸರಕಾರದ ಪ್ರಯತ್ನಗಳು ಕೂಡಾ ವಿಫಲಗೊಳ್ಳುತ್ತಿವೆ. ಆಂಗ್ಲ ಮಾಧ್ಯಮದ ಶಿಕ್ಷಣದ ಕುರಿತು ಸಮಾಜದಲ್ಲಿ ಇನ್ನಿಲ್ಲದ ಮಮಕಾರ ಕಂಡುಬರುತ್ತಿದೆ. ಆದರೆ ಸ್ವಾತಂತ್ರ್ಯಪೂರ್ವದಲ್ಲಿ ಮಿಶನರಿಗಳು ಶಾಲೆಗಳನ್ನು ಆರಂಭಿಸುವ ಸಂದರ್ಭದಲ್ಲಿ ಮಾತೃಭಾಷಾ ಶಿಕ್ಷಣದ ಮಹತ್ವದ ಅರಿವು ಅವರಿಗಿತ್ತು. ಇಂಗ್ಲಿಷನ್ನು ಭಾರತೀಯರಿಗೆ ಕಲಿಸುವ ಅನಿವಾರ್ಯತೆ ಕೂಡ ಅವರಿಗಿತ್ತು. ಇವೆರಡನ್ನು ತುಂಬ ನಾಜೂಕಾದ ಕ್ರಮದಲ್ಲಿ ಅವರು ಜಾರಿಗೆ ತಂದರು. ಇಂಗ್ಲಿಷ್‌ನಲ್ಲಿ ಸಂವಹನ ಚತುರತೆಯುಳ್ಳ ವ್ಯಕ್ತಿ ಇತರರಿಗಿಂತ ಶ್ರೇಷ್ಠ ಎಂಬ ಭಾವವನ್ನು ವ್ಯವಹಾರಿಕವಾಗಿ ಬಿತ್ತುವಲ್ಲಿ ಬ್ರಿಟಿಷರು ತಕ್ಕಮಟ್ಟಿಗೆ ಯಶಸ್ಸನ್ನು ಅಂದೇ ಕಂಡುಕೊಂಡಿದ್ದರು. ಅಂದಿನ ಕಾಲಘಟ್ಟದಲ್ಲಿ ಮಾತೃಭಾಷಾ ಶಿಕ್ಷಣದ ಮಹತ್ವದ ಕುರಿತು ಭಾರತೀಯರ ಅನಿಸಿಕೆಗಳು ಆತ್ಮಕಥೆಗಳಲ್ಲಿ ಹೀಗೆ ದಾಖಲಾಗಿವೆ.

ಮಹಾತ್ಮಾ ಗಾಂಧೀಜಿಯವರ ನನ್ನ ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ ಇದರಲ್ಲಿನ ಉಲ್ಲೇಖಗಳನ್ನು ಗಮನಿಸೋಣ: ಗಾಂಧೀಜಿಯವರಿಗೆ ಪ್ರೌಢಶಾಲೆಯಲ್ಲಿ ಸಂಸ್ಕೃತ ಕಲಿಕೆಯಲ್ಲಿ ಅತಿಯಾಗಿದ್ದ ಬಾಯಿಪಾಠ ಕಷ್ಟ ಎಂದು ಎನಿಸುತ್ತಿತ್ತು. ಪಾರಸಿ ಕಲಿಯುವ ಅವಕಾಶವೂ ಶಾಲೆಯಲ್ಲಿ ಲಭ್ಯವಿತ್ತು. ಒಂದು ಹಂತದಲ್ಲಿ ಅವರು ಎಲ್ಲರೂ ಸುಲಭ ಎನ್ನುತ್ತಿದ್ದ ಪಾರಸಿ ಭಾಷೆಯನ್ನು ಕಲಿಯುವ ಉದ್ದೇಶದಿಂದ ಆ ತರಗತಿಗೆ ಹೋಗಿ ಕುಳಿತರು. ಇದನ್ನು

ನೋಡಿ ವ್ಯಥೆಪಟ್ಟ ಅವರ ಸಂಸ್ಕೃತ ಶಿಕ್ಷಕರು "ನಿನ್ನ ತಂದೆ ವೈಷ್ಣವರೆಂಬುದನ್ನು ನೀನು ಮರೆತುದು ಹೇಗೆ? ನಿನ್ನ ಧರ್ಮಕ್ಕೆ ಸಂಬಂಧಿಸಿದ ಭಾಷೆಯನ್ನು ಕಲಿಯುವುದಿಲ್ಲವೆ? ನಿನಗೆ ಕಠಿಣವಾದುದನ್ನು ನನ್ನ ಹತ್ತಿರ ಕೇಳು. ವಿದ್ಯಾರ್ಥಿಗಳಿಗೆ ಶಕ್ತಿ ಮೀರಿ ಕಲಿಸಬೇಕೆಂಬುದೇ ನನ್ನ ಇಚ್ಛೆ. ಮುಂದೆ ಮುಂದೆ ಓದಿದಂತೆ ಅದರ ರಸ ನಿನಗೇ ಗೊತ್ತಾಗುತ್ತದೆ. ನೀನು ಹೀಗೆ ನಿರಾಶನಾಗಬಾರದು. ನೀನು ಮತ್ತೆ ಬಂದು ನನ್ನ ತರಗತಿಯಲ್ಲೇ ಕುಳಿತುಕೋ" (ಗಾಂಧಿ ಮೋ.ಕ., 1962, ಪು: 17) ಎಂದು ಹೇಳಿದರು. ಆ ಸಂಸ್ಕೃತ ಶಿಕ್ಷಕರ (ಕೃಷ್ಣ ಶಂಕರ್ ಪಾಂಡ್ಯ) ಉಪಕಾರವನ್ನು ಕೃತಜ್ಞತೆಯಿಂದ ಸ್ಮರಿಸುವುದಾಗಿಯೂ, ಅವರ ಅಂದಿನ ಆ ಮಾತುಗಳಿಂದಾಗಿ ಮುಂದೆ ತಮಗೆ ಪವಿತ್ರ ಗ್ರಂಥಗಳಲ್ಲಿ ಆಸಕ್ತಿ ಹುಟ್ಟುವುದು ಸಾಧ್ಯವಾಯಿತು ಎಂಬುದಾಗಿ ಗಾಂಧೀಜಿಯವರು ಹೇಳಿಕೊಳ್ಳುತ್ತಾರೆ.

ಜಾತೀಯ ಕಾರಣಗಳಿಂದ ಸಂಸ್ಕೃತ ಕಲಿಕೆಯಿಂದ ವಂಚಿತನಾದೆ ಎನ್ನುವ ಕುವೆಂಪು, ದೇಜಗೌ ಒಂದೆಡೆ. ಶೂದ್ರನಾದರೂ ಸಂಸ್ಕೃತ ಕಲಿತು ಶಾಲೆಗೆ ಪ್ರಥಮ ಸ್ಥಾನಿಯಾದೆ ಎನ್ನುವ ಕೈಯಾರ ಕಿಞ್ಞಣ್ಣ ರೈಗಳು, ಎಚ್. ನರಸಿಂಹಯ್ಯನವರು ಇನ್ನೊಂದೆಡೆ.  ಹೀಗೆ ಭಾಷಾ ಕಲಿಕೆಯಲ್ಲಿ ವೈವಿಧ್ಯಮಯ ಲೋಕವನ್ನು ಆತ್ಮಕಥೆಗಳು ತೋರಿಸಿಕೊಡುತ್ತವೆ.

ಸಂಸ್ಕೃತ ಭಾಷೆಯ ಕಲಿಕೆಯು ವಿದ್ಯಾರ್ಥಿಗಳಿಗೆ ಬಹಳ ಪ್ರಯೋಜನಕಾರಿ ಎಂಬುದನ್ನು ಪೆರ್ಲ ಕೃಷ್ಣ ಭಟ್ ಎಂಬ ಶಿಕ್ಷಕರು ತಮ್ಮ ಆತ್ಮಕಥೆ ಬದುಕಿ ಫಲವೇನು? ಎಂಬ ಕೃತಿಯಲ್ಲಿ ಹೀಗೆ ಉಲ್ಲೇಖಿಸಿದ್ದಾರೆ.

"ಅತಿ ಪ್ರಾಚೀನವಾದ ಸಂಸ್ಕೃತ ಭಾಷೆಯಲ್ಲಿರುವ ನಿಖರವೂ ನಿಸ್ಸಂದಿಗ್ಧವೂ ಆದ ಸ್ವಾಭಿಪ್ರಾಯ ಪ್ರಕಟನ ಸಾಮರ್ಥ್ಯ, ಭಾಷಾ ಮೂಲದಿಂದ ಹುಟ್ಟಿ ಬಂದ ಪ್ರತಿಯೊಂದು ಶಬ್ದದ ವಿಶಿಷ್ಟವಾದ ಅರ್ಥ, 'ಕಿರಿದರೊಳ್ ಪಿರಿದರ್ಥಮಂ'  ಹೇಳುವ ಬಂಧುರತೆ, ಭಾವಾನುಗುಣವಾದ ಧ್ವನಿಸಂಯೋಜನೆ, ವ್ಯಾಕರಣಬದ್ಧತೆ, ಅಕಾರಾದಿ ಹಾಕಾರಾಂತದವರೆಗಿನ ಎಲ್ಲ ಸ್ವರಗಳನ್ನು ಮತ್ತು ವ್ಯಂಜನಾಕ್ಷರಗಳನ್ನು ಪ್ರತ್ಯೇಕಿಸಿ ಅವುಗಳ ಉತ್ಪತ್ತಿ ಸ್ಥಾನಗಳನ್ನು ಗುರುತಿಸಿ ಸಂಯೋಜಿಸಿದ ವೈಜ್ಞಾನಿಕ ವರ್ಣಮಾಲೆ, ಲಿಂಗ, ವಚನ, ವಿಭಕ್ತಿ, ಉಪಸರ್ಗ ಪ್ರತ್ಯಯಾದಿಗಳ ಸಮುಚಿತ ಪ್ರಯೋಗ, ಸಮಸ್ತ ಪದಗಳ ಸರಮಾಲೆ ಮುಂತಾದವುಗಳು ಪ್ರಪಂಚದ ಇನ್ನಾವ ಭಾಷೆಯಲ್ಲೂ ದೊರೆಯುವುದು ದುರ್ಲಭ. ಈ ಭಾಷೆಯ ಅಧ್ಯಯನ ಮಾಡಿದವನಿಗೆ ಉಚ್ಚಾರ ಸ್ಪಷ್ಟತೆ, ಉದಾತ್ತಾನುದಾತ್ತಾದಿ ಸ್ವರಗಳ ಸಮುಚಿತ

ಪ್ರಯೋಗ, ವ್ಯಾಕರಣ ಬದ್ಧತೆ, ವಾಕ್ಯ ಶುದ್ಧಿ ಮುಂತಾದವುಗಳು ತಾನಾಗಿಯೇ ಹಸ್ತಗತವಾಗುತ್ತವೆ." (ಪೆರ್ಲ ಕೃಷ್ಣ ಭಟ್, 1994, ಪು: 73)

ಶಾಲಾ ವಿದ್ಯಾರ್ಥಿಗಳು ಭಾಷಾ ಕಲಿಕೆಯಲ್ಲಿ ಆಯ್ಕೆಗೆ ಅವಕಾಶವನ್ನು ಕಲ್ಪಿಸಿ ನೀಡಿದ ಸಂದರ್ಭದಲ್ಲಿ ಸುಲಭ ಭಾಷೆ, ಹೆಚ್ಚು ಅಂಕಗಳನ್ನು ಪಡೆಯಲು ಸಾಧ್ಯವಾಗುವ ಭಾಷೆ, ಗೆಳೆಯ ಅಥವಾ ಬಂಧುಗಳು ಪ್ರಭಾವಿಸಿದ ಭಾಷೆ, ಹೀಗೆ ವಿವಿಧ ಸಂಗತಿಗಳಿಗೆ ಕಿವಿಕೊಟ್ಟು ಆಯ್ಕೆಯನ್ನು ಮಾಡುತ್ತಾರೆ. ತ್ರಿಭಾಷಾ ಸೂತ್ರದಂತೆ ಪ್ರಾಥಮಿಕ ವಿಭಾಗದಿಂದಲೇ ಕರ್ನಾಟಕದ ವಿದ್ಯಾರ್ಥಿ ಆರನೇ ತರಗತಿಯಿಂದ ಮೂರು ಭಾಷೆಗಳನ್ನು ಅಧ್ಯಯನ ಮಾಡಬೇಕು. ಆ ಮೂರರಲ್ಲಿ ಪ್ರಥಮ/ದ್ವಿತೀಯ ಭಾಷೆಯಾಗಿ ಕನ್ನಡ/ ಇಂಗ್ಲಿಷ್ ಇವುಗಳನ್ನು ಕಡ್ಡಾಯವಾಗಿ ಕಲಿಯಲೇಬೇಕಾಗಿದೆ. ಉಳಿದಂತೆ ಹಿಂದಿ, ಸಂಸ್ಕೃತ, ಕೊಂಕಣಿ, ತುಳು, ಉರ್ದು, ತಮಿಳು, ತೆಲುಗು, ಮರಾಠಿ ಮುಂತಾದ ಭಾಷೆಗಳಲ್ಲಿ ಒಂದನ್ನು, ಆ ಶಾಲೆಯಲ್ಲಿ ಭಾಷಾಶಿಕ್ಷಕರ ಲಭ್ಯತೆಯನ್ನು ಅನುಸರಿಸಿ, ಕಲಿಯುವ ಆಯ್ಕೆ ವಿದ್ಯಾರ್ಥಿಗಳಿಗೆ ಇದೆ.

ಶಾಲೆಗಳಲ್ಲಿ ಬೇರೆ ಬೇರೆ ಭಾಷೆಗಳನ್ನು ಕಲಿಸಲು ಅವಕಾಶ ಕಲ್ಪಿಸುವ ಕುರಿತು ಗಾಂಧೀಜಿಯವರು ಹೀಗೆ ಹೇಳಿದ್ದಾರೆ.

ಭರತ ವರ್ಷದಲ್ಲಿ ಎಲ್ಲ ಉಚ್ಚ ಶಿಕ್ಷಣ ಕ್ರಮದಲ್ಲಿಯೂ, ಮಾತೃಭಾಷೆಯಲ್ಲದೆ ಹಿಂದೀ, ಸಂಸ್ಕೃತ, ಪಾರಸೀ, ಅರಬ್ಬೀ ಮತ್ತು ಇಂಗ್ಲಿಷ್ ಭಾಷೆಗಳಿಗೆ ಸ್ಥಾನ ಕೊಡಬೇಕೆಂಬುದು ನನ್ನ ಈಗಿನ ಅಭಿಪ್ರಾಯ. ಈ ದೊಡ್ಡ ಪಟ್ಟಿ ನೋಡಿ ಯಾರೂ ಹೆದರಬೇಕಾದುದಿಲ್ಲ. ನಮ್ಮ ಶಿಕ್ಷಣ ಕ್ರಮ ಹೆಚ್ಚು ವ್ಯವಸ್ಥಿತವಾಗಿದ್ದು, ಇಂಗ್ಲಿಷ್ ಮೂಲಕ ಪಾಠವನ್ನು ಕಲಿಯುವ ಹೊರೆ ನಮ್ಮ ವಿದ್ಯಾರ್ಥಿಗಳಿಗೆ ತಪ್ಪುವುದಾದರೆ ಈ ಎಲ್ಲ ಭಾಷೆಗಳನ್ನೂ ಕಲಿಯುವುದು ಸುಲಭವಾಗುವುದು. ಅದರಲ್ಲಿ ವಿದ್ಯಾರ್ಥಿಗಳಿಗೆ ಆನಂದವಾಗುವುದು. ಒಂದು ಭಾಷೆಯನ್ನು ಶಾಸ್ತ್ರ ರೀತಿಯಿಂದ ಅಧ್ಯಯನ ಮಾಡಿದರೆ, ಇತರ ಭಾಷೆಗಳ ಜ್ಞಾನ ಸುಗಮವಾಗುವುದು. (ಗಾಂಧಿ ಮೋ.ಕ., 1995, ಪು 18).

ಈಗಲೂ ಬಾಲ್ಯದಲ್ಲಿಯೇ ತಮ್ಮ ಪರಿಸರದಲ್ಲಿ ಪ್ರಚಲಿತವಿರುವ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಲೀಲಾಜಾಲವಾಗಿ ಕಲಿತು ಬಳಸುವ ಮಕ್ಕಳನ್ನು ನಾವು ಕಾಣುತ್ತೇವೆ. ಶೈಕ್ಷಣಿಕವಾಗಿ ಭಾಷಾ ಕಲಿಕೆಗೆ ಸೂಕ್ತ ವಾತಾವರಣವನ್ನು ಕಲ್ಪಿಸಿಕೊಟ್ಟದ್ದೇ ಆದಲ್ಲಿ ಬೇರೆ ಬೇರೆ ಭಾಷೆಗಳನ್ನು ವಿದ್ಯಾರ್ಥಿಗಳು ಸುಲಲಿತವಾಗಿ

ಕಲಿಯಬಲ್ಲರು. ಒಂದು ಭಾಷೆಯ ಪ್ರಭುತ್ವದ ಕಲಿಕೆ ಇನ್ನೊಂದು ಭಾಷೆಯ ಕಲಿಕೆಯನ್ನು ಪ್ರಭಾವಿಸುತ್ತದೆ. ಆದರೆ ಶಿಕ್ಷಕರು ಸಂವೇದನಾ ಶೂನ್ಯರಾದಾಗ, ಪಠ್ಯಕ್ರಮವು ತೀರಾ ನಿರಾಸಕ್ತಿಯನ್ನು ಮೂಡಿಸಿದಾಗ ವಿದ್ಯಾರ್ಥಿಗಳು ಭಾಷಾ ಕಲಿಕೆಯ ರುಚಿಯನ್ನೇ ಕಳೆದುಕೊಳ್ಳುತ್ತಾರೆ. ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಯುತ್ತಿರುವ ಕನ್ನಡ ಮಾತೃಭಾಷೆಯ ವಿದ್ಯಾರ್ಥಿ 'ಕನ್ನಡ ಕಷ್ಟ' ಎಂದು ಹೇಳುತ್ತಿದ್ದಾನಾದರೆ, ಶಿಕ್ಷಕನ ಬೋಧನಾಕ್ರಮ, ಪಠ್ಯಪುಸ್ತಕ, ಪರೀಕ್ಷಾ ಪದ್ಧತಿ ಇವುಗಳಲ್ಲಿ ಯಾವುದೋ ಒಂದು ಅಥವಾ ಎಲ್ಲವೂ ನ್ಯೂನತೆಯಿಂದ ಕೂಡಿದೆ ಎಂಬುದಾಗಿ ತಿಳಿಯಬೇಕು.

ಉತ್ತಮ ಕೈ ಬರಹದ ಅಗತ್ಯದ ಬಗ್ಗೆ ಗಾಂಧೀಜಿಯವರ ಮಾತುಗಳು ಚಿಂತನಶೀಲವಾಗಿವೆ.

. . ಮತ್ತೊಂದು ದುರ್ಲಕ್ಷ್ಯಕ್ಕಾಗಿ ನಾನು ಇಂದಿಗೂ ದಂಡ ತೆರುತ್ತಿದ್ದೇನೆ. ಅಂದವಾದ ಅಕ್ಷರ, ಒಳ್ಳೆಯ ಬರವಣಿಗೆ, ಶಿಕ್ಷಣದ ಅವಶ್ಯಕ ಅಂಶವಲ್ಲವೆಂಬ ಭಾವನೆ ನನಗೆ ಹೇಗೆ ಬಂತೋ ಕಾಣೆ. ಇಂಗ್ಲೆಂಡ್‌ಗೆ ಹೋಗುವವರೆಗೆ ನನ್ನಲ್ಲಿ ಇದೇ ಭಾವನೆ ಇತ್ತು. ಅನಂತರ ದಕ್ಷಿಣ ಆಫ್ರಿಕಾಕ್ಕೆ ಹೋದ ಮೇಲೆ, ಅಲ್ಲಿ ಸುಶಿಕ್ಷಿತ ಯುವಕರ ಮತ್ತು ವಕೀಲರ ಮುತ್ತು ಪೋಣಿಸಿದಂತಿದ್ದ ಸುಂದರ ಬರವಣಿಗೆ ನೋಡಿ, ನನಗೆ ನಾಚಿಕೆಯೂ, ಪಶ್ಚಾತ್ತಾಪವೂ ಉಂಟಾಯಿತು. ಕೆಟ್ಟ ಅಕ್ಷರದ ಬರವಣಿಗೆ ಅಪಕ್ವ ಮತ್ತು ಅಪೂರ್ಣ ಶಿಕ್ಷಣದ ಚಿಹ್ನೆ ಎಂದು ನಾನು ಅರಿತೆನು. ಈಚೆಗೆ ನನ್ನ ಬರಹವನ್ನು ತಿದ್ದಿಕೊಳ್ಳಬೇಕೆಂದು ಪ್ರಯತ್ನಿಸಿದೆ. ಸುಟ್ಟ ಮಡಿಕೆಗೆ ಹಸಿ ಮಣ್ಣನ್ನು ಮೆತ್ತಲು ಸಾಧ್ಯವೇ? ಆ ವೇಳೆಗೆ ಕಾಲ ಮೀರಿ ಹೋಗಿತ್ತು. ಚಿಕ್ಕ ವಯಸ್ಸಿನಲ್ಲಿ ಅಸಡ್ಡೆ ಮಾಡಿದುದನ್ನು ಇಂದಿನವರೆಗೆ ತಿದ್ದಿಕೊಳ್ಳಲು ಆಗಲಿಲ್ಲ. (ಗಾಂಧಿ ಮೋ.ಕ., 1995, ಪು 16)

ಅಂದವಾದ ಬರವಣಿಗೆಯು ಉತ್ತಮ ಶಿಕ್ಷಣದ ಭಾಗವಾಗಿದೆ. ಮಗುವು ಉತ್ತಮ ಬರವಣಿಗೆಯ ಕೌಶಲವನ್ನು ಬೆಳೆಸಿಕೊಳ್ಳಲು ಪರಿಣಾಮಕಾರಿ ಪರಿಸರವನ್ನು ವಿದ್ಯಾರ್ಥಿಗಳಿಗೆ ನಿರ್ಮಿಸಿ ನೀಡಬೇಕು. ಅಭಿಪ್ರೇರಣೆಯನ್ನು ಒದಗಿಸುವ ನೂತನ ತಂತ್ರಗಳನ್ನು ಅನುಸರಿಸಬೇಕು. ಇಲ್ಲವಾದರೆ ಕಾಪಿ (copy) ಬರೆಯುವ ಕ್ರಮ ಯಾಂತ್ರಿಕ ಕ್ರಿಯೆಯಾಗುತ್ತದೆ. ಕಾಪಿ ತಿದ್ದುವುದು ಶಿಕ್ಷಕರ 'ಕರ್ಮ' ಎನಿಸಿಕೊಳ್ಳುತ್ತದೆ.

ಮಾತೃಭಾಷಾ ಶಿಕ್ಷಣದ ಮಹತ್ವದ ಕುರಿತು ರವೀಂದ್ರನಾಥ ಠಾಗೋರ್ ಇವರ ಆತ್ಮಕಥೆಯಲ್ಲಿನ ಕೆಲವು ಅಂಶಗಳನ್ನು ಇಲ್ಲಿ ವಿಶೇಷವಾಗಿ ಉಲ್ಲೇಖಿಸಲಾಗಿದೆ.

ತಂದೆಯವರು “ಇನ್ನು ನೀವು ಬಂಗಾಳಿಯ ಪಾಠಗಳನ್ನು ಕಲಿಯಬೇಕಾಗಿಲ್ಲ” ಎಂದರು. ನಮ್ಮ ಮನವು ಸಂತೋಷದಿಂದ ಕುಣಿಯಿತು. ನಮ್ಮ ಪಂಡಿತರ ವಿದಾಯದ ಮಾತುಗಳು “ಕರ್ತವ್ಯದಿಂದ ಕೆಲವೊಮ್ಮೆ ನಿಷ್ಠುರವಾಗಿ ನಿಮ್ಮೊಡನೆ ನಡೆದುಕೊಂಡಿರಬಹುದು. ಅದನ್ನು ನೆನಪಿನಲ್ಲಿಟ್ಟುಕೊಳ್ಳಬೇಡಿ. ನಾನು ಕಲಿಸಿದುದರ ಮೌಲ್ಯವನ್ನು ನಂತರ ನೀವು ತಿಳಿಯುವಿರಿ” ನಿಶ್ಚಯವಾಗಿಯೂ ಆ ಮೌಲ್ಯಗಳನ್ನು ನಾನು ಕಲಿತಿದ್ದೇನೆ. ನಮ್ಮ ಭಾಷೆಯಲ್ಲಿಯೇ ನಮಗೆ ಕಲಿಸಿದ್ದರಿಂದ ನಮ್ಮ ಮನಸ್ಸು ಜಾಗೃತವಾಯಿತು. ಆಹಾರದಂತೆಯೇ ಕಲಿಕೆಯೂ ಇರಬೇಕು. ಮೊದಲ ತುತ್ತಿನಲ್ಲಿಯೇ ರುಚಿಯ ಸವಿ ದೊರೆತರೆ, ಹೊಟ್ಟೆಯು ತುಂಬುವುದಕ್ಕಿಂತ ಮುಂಚೆಯೇ ಎಚ್ಚರವಾಗುತ್ತದೆ, ಜೀರ್ಣರಸಗಳು ತುಂಬು ಚಟುವಟಿಕೆಯಿಂದ ತಮ್ಮ ಕಾರ್ಯವನ್ನು ಮಾಡುತ್ತವೆ. ಇಂಗ್ಲಿಷಿನಲ್ಲಿ ಕಲಿಸಿದರೆ, ಬಂಗಾಲಿ ಹುಡುಗರಿಗೆ ಎಂದೂ ಹೀಗಾಗುವುದಿಲ್ಲ. ಮೊದಲ ಕಡಿತದಲ್ಲಿಯೇ ಎರಡೂ ಸಾಲಿನ ಹಲ್ಲುಗಳು ಉದುರುತ್ತವೆ - ಬಾಯಲ್ಲಿ ಭೂಕಂಪವಾದಂತೆ. ಇದನ್ನು ಕಂಡುಕೊಳ್ಳುವ ವೇಳೆಗೆ ಆಹಾರದ ತುಣುಕು ನಿಕೃಷ್ಟ ಕಲ್ಲಾಗದೆ, ಅರಗುವ ಮಿಠಾಯಿಯಂತೆ ಆಗಿರುತ್ತದೆ. ಆ ವೇಳೆಗೆ ಅರ್ಧ ಆಯುಷ್ಯವು ಮುಗಿದಿರುತ್ತದೆ. ಕಾಗುಣಿತ ಮತ್ತು ವ್ಯಾಕರಣಗಳೊಡನೆ ಬಡಬಡಿಸುತ್ತಿರಲು, ಅಂತರಂಗವು ಕ್ಷಯಿಸುತ್ತ, ಕೊನೆಗೆ ಸವಿ ಹತ್ತಿದಾಗ ಹಸಿವು ಮಾಯವಾಗಿರುತ್ತದೆ. ಇಡೀ ಮನವನ್ನು ಪ್ರಾರಂಭದಿಂದಲೂ ಸಂಪೂರ್ಣವಾಗಿ ಕಾರ್ಯಗತ ಮಾಡದಿದ್ದರೆ ಅದರ ಪರಿಪೂರ್ಣ ಶಕ್ತಿಯು ಕೊನೆಗೆ ಕುಗ್ಗುತ್ತದೆ. ಎಲ್ಲೆಡೆಯೂ ಇಂಗ್ಲೀಷಿನ ಬಗ್ಗೆ ಕೂಗಿದ್ದಾಗ ನನ್ನ ಮೂರನೆಯ ಅಣ್ಣ, ನಮ್ಮನ್ನು ಬಂಗಾಳಿ ಭಾಷೆಗೆ ನಿಲ್ಲಿಸಿಕೊಳ್ಳಲು ಧೈರ್ಯವಹಿಸಿದ. ಅವನಿಗೆ ಸ್ವರ್ಗದಲ್ಲಿಯೂ ನನ್ನ ಕೃತಜ್ಞತಾಪೂರ್ವಕ ಗೌರವಗಳು. (ರವೀಂದ್ರನಾಥ ಠಾಕೂರ್, 2012 ಪು: 50)

ಸಾಹಿತ್ಯದಲ್ಲಿ ನೊಬೆಲ್ ಪಾರಿತೋಷಕ ಪಡೆದ ರವೀಂದ್ರನಾಥ ಠಾಗೋರರು ನಿಯಮಿತವಾಗಿ ಹಾಜರಾಗಿ ಶಾಲಾ ಶಿಕ್ಷಣವನ್ನು ಪಡೆದಿರಲಿಲ್ಲ. ಶಿಕ್ಷಕರೇ ಮನೆಗೆ ಬಂದು ಮನೆ ಪಾಠ ಹೇಳಿಕೊಡುವ ಕ್ರಮವನ್ನು ಅವರ ತಂದೆ ಜಾರಿಗೆ ತಂದಿದ್ದರು. ಮುಂದೆ ‘ಶಾಂತಿನಿಕೇತನ’ ದ ಮೂಲಕ ಅವರು ಶಿಕ್ಷಣದಲ್ಲಿ ಪ್ರತ್ಯೇಕವಾದ ಪ್ರಯೋಗಗಳನ್ನು ನಡೆಸಿದರು. ಕರ್ನಾಟಕದಲ್ಲಿ ಕೋಟ ಶಿವರಾಮ ಕಾರಂತರು ತಮ್ಮ ಇಬ್ಬರು ಮಕ್ಕಳನ್ನು ಪ್ರಾಥಮಿಕ ಶಾಲೆಗೆ ಕಳುಹಿಸದೇ ಮನೆಯಲ್ಲಿ ತಾವೆ ಕಲಿಸುತ್ತಾ ಇರುವುದಕ್ಕೆ ಕಾರಣ ಕೇಳಿದಾಗ ‘ಅವರನ್ನು ವಿದ್ಯಾವಂತರನ್ನಾಗಿ ರೂಪಿಸಬೇಕೆಂದಿದ್ದೇನೆ’ ಎಂದು ಉತ್ತರಿಸಿದ್ದರಂತೆ. ಇವರು ಕೂಡಾ ಶಾಲಾ ಶಿಕ್ಷಣಕ್ಕೆ ಹೊಸ ರೂಪವನ್ನು ನೀಡುವ ಪ್ರಯೋಗಗಳನ್ನು ಪುತ್ತೂರಿನಲ್ಲಿ ‘ಬಾಲವನ’ ದ ಮೂಲಕ ಕೈಗೊಂಡರು.

ಇತ್ತೀಚಿನ ಸಾಮಾಜಿಕ ವಿದ್ಯಮಾನಗಳಿಗೂ ಸ್ಪಂದಿಸುವ ಕಡಿದಾಳು ಶಾಮಣ್ಣನವರ ಆತ್ಮಕಥೆ ಕಾಡತೊರೆಯ ಜಾಡು ಕೃತಿಯಲ್ಲಿ ಶಿಕ್ಷಣ ಮಾಧ್ಯಮದ ಕುರಿತು ಹೇಳಿರುವ ಈ ಮಾತುಗಳನ್ನು ಗಮನಿಸೋಣ.

ಪರೀಕ್ಷೆ ಬಂತು ಪರೀಕ್ಷೆ.. ಆದರೆ ಹೆಚ್ಚಿನ ಸಬ್ಜೆಕ್ಟ್‌ಗಳು ಅರ್ಥವೇ ಆಗಿರ್ಲಿಲ್ಲ. ಎಲ್ಲ ಇಂಗ್ಲಿಷಿನಲ್ಲೆ ಇದ್ದಿದ್ದರಿಂದ ತುಂಬ ಪ್ರಯಾಸವಾಗ್ತಿತ್ತು. ನಂಗೀವತ್ತಿಗೂ ಅನ್ಸೋದು ಇಂಗ್ಲಿಷ್‌ನಲ್ಲಿ ಇರದೇ ಎಲ್ಲ ಕನ್ನಡದಲ್ಲೇ ಓದಿ ಪರೀಕ್ಷೆ ಬರೆಯೋ ಸವಲತ್ತಿದ್ದರೆ ನಾನ್ಯಾವತ್ತೋ ನನ್ನ ಆಸೆಯಂತೆ ಗ್ರಾಮ ನೈರ್ಮಲ್ಯದ ಬಗ್ಗೆ ಪಿಎಚ್.ಡಿ. ಮಾಡ್ತಿದ್ದೆ ಅಂತ. ಈ ಇಂಗ್ಲಿಷ್ ಇದ್ಯಲ್ಲ ಇದು ನಮಗೆ ಓದೋ ಆಸೇನೆ ಮುರುಟಿಸಿಬಿಡುತ್ತದೆ. ನನ್ನ ಮೊಮ್ಮಗಳು ಊರ್ವಿಗೆ ಅವಳ ಅಪ್ಪ ಅಮ್ಮ ಇಬ್ರೂ ಎರಡು ಕಡೆ ಕೂತ್ಕಂಡು ಹೇಳಿಕೊಟ್ಟು ಒತ್ತಾಯ ಪೂರ್ವಕವಾಗಿ ಕಲಿಸೋದನ್ನ ನೋಡಿದಾಗೆಲ್ಲ ಈ ಮಗು ಎಷ್ಟೊಂದು ಚುರುಕಾಗಿದ್ದಾಳೆ. ಒಂದ್ವೇಳೆ ಅವಳು ಕನ್ನಡ ಮೀಡಿಯಂನಲ್ಲಿ ಓದ್ತಿದ್ರೆ ಅವಳಿಗೆ ಯಾರೂ ಹೇಳ್ಕೊಡೋದೇ ಬೇಡಿತ್ತು. ಅವಳಿಗೆ ಶಾಲೆಯಲ್ಲಿ ಹೇಳಿಕೊಟ್ಟಿದ್ದೆ ಸಾಕಾಗ್ತಿತ್ತು ಅನ್ನಿಸ್ತಿರತ್ತೆ. (ಕಡಿದಾಳು ಶಾಮಣ್ಣ, 2015, ಪು: 80)

ಮಾತೃಭಾಷಾ ಶಿಕ್ಷಣದ ಮಹತ್ವದ ಬಗ್ಗೆ ತಿಳಿಹೇಳುವ ಆತ್ಮಕಥೆಯ ಈ ಮೇಲಿನ ಮಾತುಗಳು ತುಂಬ ಮಹತ್ವದ್ದು. ಬೇರೆ ಬೇರೆ ಕಾಲಘಟ್ಟದಲ್ಲಿ, ಭಿನ್ನ ಭಾಷಾ ಸಂದರ್ಭಗಳಲ್ಲಿ ಶಾಲಾ ಶಿಕ್ಷಣವನ್ನು ಪಡೆದ ಠಾಗೋರ್, ಗಾಂಧೀಜಿ ಹಾಗೂ ಕಡಿದಾಳು ಶಾಮಣ್ಣ ಇವರೆಲ್ಲರೂ ಮಾತೃಭಾಷಾ ಶಿಕ್ಷಣದ ಮಹತ್ವದ ಕುರಿತು ಒಂದೇ ಬಗೆಯ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ. ಅವರ ಭಾವನೆಯನ್ನು ಪರಿಣಾಮಕಾರಿಯಾಗಿ ಸಮಾಜಕ್ಕೆ ತಿಳಿಹೇಳುವುದು ಸಾಧ್ಯವಾಗುತ್ತಿಲ್ಲ. ಆದುದರಿಂದಲೇ ಆಂಗ್ಲ ಮಾಧ್ಯಮದ ಶಿಕ್ಷಣದ ವ್ಯಾಮೋಹ ವಿಪರೀತವೆನ್ನಿಸುವಷ್ಟು ದೊಡ್ಡದಾಗಿ ಬೆಳೆಯುತ್ತಿದೆ. ಆದರೆ ಮನೋವಿಜ್ಞಾನಿಗಳು ನಡೆಸಿದ ಪ್ರಯೋಗಗಳು ಮಾತೃಭಾಷೆಯಲ್ಲಿ ಪ್ರಾಥಮಿಕ ಶಿಕ್ಷಣದ ಅಗತ್ಯವನ್ನು ಇನ್ನಷ್ಟು ಖಚಿತಪಡಿಸುತ್ತಿವೆ.

**ಶಾಲಾ ಹಂತದಲ್ಲಿ ಇಂಗ್ಲಿಷ್ ಪುಸ್ತಕ ಓದಲು ಆರಂಭಿಸಿದ ಕನ್ನಡ ವಿದ್ಯಾರ್ಥಿಗಳ ಪಾಡು**

ಷೇಕ್ಸ್‌ಪಿಯರ್‌ನ ಪುಸ್ತಕವೊಂದನ್ನು ಓದುವ ಆಸೆಯಿಂದ ಅದನ್ನು ಕೇಳಲು ಶಿಕ್ಷಕ ಸುಬ್ಬಕೃಷ್ಣಯ್ಯನವರ ಮನೆಗೆ ಹೋಗಿದ್ದ ಮಾಸ್ತಿಯವರಿಗೆ ಇಂಗ್ಲಿಷ್ ಪುಸ್ತಕವನ್ನು ಓದುವ ಕ್ರಮದ ಕುರಿತು ಸುಬ್ಬಕೃಷ್ಣಯ್ಯನವರು ಹೇಳುವ ಮಾತುಗಳು ಹೀಗೆ ಇವೆ.

ಇದೋ, ಒಂದು ಪುಟ ತೆಗೆಯುತ್ತೀಯೆ. ಒಂದು ಪಂಕ್ತಿ ಓದುತ್ತೀಯೆ. ವಾಕ್ಯ ಮುಗಿಯುವವರೆಗೆ ಕಾಯೋಣ ಬೇಡ. ನೀನು ಓದುತ್ತಿದ್ದಂತೆ ಒಂದು ಕಷ್ಟದ ಶಬ್ದ ಬಂದರೆ ಅಲ್ಲಿಗೆ ಓದುವುದನ್ನು ನಿಲ್ಲಿಸಬೇಕು. ಡಿಕ್ಷನರಿ ತೆಗೆದುಕೊಳ್ಳಬೇಕು. ಆ ಶಬ್ದವನ್ನು ಎತ್ತಿ ಅದರ ಅರ್ಥವನ್ನು ನೋಡಿಕೊಳ್ಳಬೇಕು. ಸುಮಾರು ಅಲ್ಲಿಗೆ ಯಾವ ಅರ್ಥ ಸರಿಹೊಂದುತ್ತದೆ ಎಂದು ನಿಶ್ಚಯಮಾಡಿಕೊಳ್ಳಬೇಕು. ಒಂದು ನೋಟ್‌ಬುಕ್ ತೆಗೆದುಕೊಂಡು ಆ ಶಬ್ದವನ್ನು ಅದರಲ್ಲಿ ಬರೆದು ಆ ಶಬ್ದಕ್ಕೆ ಯುಕ್ತವೆಂದು ಕಂಡ ಅರ್ಥವನ್ನು ಅದರಲ್ಲಿ ಬರೆದುಕೊಳ್ಳಬೇಕು. ಆಮೇಲೆ ವಾಕ್ಯವನ್ನು ಮುಂದಕ್ಕೆ ಓದಬೇಕು. ಮತ್ತೆ ಒಂದು ಕಷ್ಟವಾದ ಶಬ್ದ ಬರುತ್ತದೆ. ಮತ್ತೆ ಹೀಗೆಯೇ ಮಾಡಬೇಕು. ಮೊದಲ ವಾಕ್ಯ ಮುಗಿಯುವುದಕ್ಕೆ ಐದು ಶಬ್ದದ ಅರ್ಥವನ್ನು ನೋಡಬೇಕಾಗಬಹುದು. ಆದರೆ ಇದಕ್ಕೆ ನೀನು ಬೇಸರ ಪಟ್ಟುಕೊಳ್ಳಬಾರದು. ಒಂದು ದಿನದಲ್ಲಿ ಒಂದೆ ವಾಕ್ಯವನ್ನು ಮಾಡಿ ಓದುವುದನ್ನು ಬಿಡಬೇಕಾದರೂ ಆಗಲಿ ಎನ್ನಬೇಕು. ಆ ದಿನ ಆದಷ್ಟು ಶಬ್ದಗಳನ್ನು, ಅವುಗಳ ಅರ್ಥವನ್ನು ಅದೇ ದಿನ ಎರಡು ಸಲ, ಮೂರು ಸಲ ಓದಿ ಬಾಯಿಪಾಠ ಮಾಡಿಕೊಳ್ಳಬೇಕು. ಆ ಶಬ್ದ ಮತ್ತೆ ಬಂದರೆ ಅದರ ಅರ್ಥ ನಿನಗೆ ತಿಳಿದಿರಬೇಕು. ಅವಶ್ಯಕವಾದರೆ ನೀನು ಆ ಶಬ್ದವನ್ನು ಸರಿಯಾಗಿ ಬಳಸುವ ಶಕ್ತಿ ಪಡೆದಿರಬೇಕು. (ಮಾಸ್ತಿ, 2008, ಪು: 120)

ಇದೇ ಕ್ರಮದಲ್ಲಿ ಓದಿ ಶಿಕ್ಷಕರಿಂದ ಸೈ ಎನಿಸಿಕೊಂಡೆ, ಮುಂದೆ ಆಂಗ್ಲಭಾಷೆಯ ವಾಕ್ಯರಚನೆಯ ಸರಣಿ ನೀರು ಕುಡಿಯುವಷ್ಟು ಸುಲಭವಾಗಿ ಹೋಯಿತು ಎನ್ನುತ್ತಾರೆ ಮಾಸ್ತಿಯವರು ತಮ್ಮ ಆತ್ಮಕಥೆ ಭಾವ ದಲ್ಲಿ.

ಇಂಗ್ಲಿಷ್ ಪುಸ್ತಕಗಳ ಓದಿನ ಸಂದರ್ಭದಲ್ಲಿ ಶಿಕ್ಷಕರು ಹೇಳಿಕೊಟ್ಟ ವಿಧಾನವನ್ನು ಒಪ್ಪದೇ ಹೊಸದೊಂದು ಮಾದರಿಯನ್ನು ರೂಪಿಸಿಕೊಂಡಿರುವುದನ್ನು ಎ.ಎನ್.ಮೂರ್ತಿರಾಯರು ಸಂಜೆಗಣ್ಣಿನ ಹಿನ್ನೋಟದಲ್ಲಿ ಹೀಗೆ ಹೇಳಿಕೊಳ್ಳುತ್ತಾರೆ.

ಆ ಕಾಲದ ಮೇಷ್ಟರುಗಳಲ್ಲಿ ಕೆಲವರು "ಓದುವಾಗ ಕ್ಲಿಷ್ಟ ಪದ ಬಂದರೆ, ಕೂಡಲೇ ನಿಘಂಟನ್ನು ತೆಗೆದು ನೋಡಿ ಅದರ ಅರ್ಥವನ್ನು ತಿಳಿದುಕೊಳ್ಳಿ. ಒಳ್ಳೆಯ ಪದಗಳನ್ನೂ ಟೈಮ್ ಎಂಡ್ ಎಗೇನ್, ನಾಟ್ ಓನ್ಲಿ.. ಬಟ್ ಆಲ್ಸೋ ಮುಂತಾದ ನುಡಿಗಟ್ಟುಗಳನ್ನೂ ಪಟ್ಟಿಮಾಡಿಕೊಂಡು ಅದನ್ನು ನಿಮ್ಮ ಬರವಣಿಗೆಯಲ್ಲಿ ಬಳಸುವ ಪ್ರಯತ್ನ ಮಾಡಿ. ಬರವಣಿಗೆ ಅದರಿಂದ ಉತ್ತಮಗೊಳ್ಳುತ್ತದೆ" ಎಂದು ಹುಡುಗರಿಗೆ ಬುದ್ಧಿವಾದ ಹೇಳುತ್ತಿದ್ದರು. ಅವರ ಮಾತಿನ ಸಾಧಕ ಬಾಧಕಗಳನ್ನು ಪರಿಶೀಲಿಸುವಷ್ಟು ಬುದ್ಧಿ ನನ್ನಲ್ಲಿ ಬೆಳೆದಿರಲಿಲ್ಲ. ನಾನು ನಿಘಂಟನ್ನು ತೆರೆದು

ನೋಡುವ ಗೋಜಿಗೆ ಹೋಗದಿದ್ದದ್ದು ಕೇವಲ ಸೋಮಾರಿತನದಿಂದ. ಅದರೆ ನಾನು ಮೇಷ್ಟರಾಗಿ ಹುಡುಗರಿಗೆ ಪಾಠ ಹೇಳುವ ಕಾಲ ಬಂದಾಗಲೂ ನನಗೆ ಆ ಹಳೆಯ ಕಾಲದ ಸಲಹೆ ಒಪ್ಪಿಗೆಯಾಗಲಿಲ್ಲ. ನಿಘಂಟಿನಿಂದ ಆಗುವ ಪ್ರಯೋಜನವನ್ನು ಯಾರೂ ಅಲ್ಲಗಳೆಯಲಾರರು. ಆದರೆ 14-15 ವರ್ಷದ ಹುಡುಗರು ಉತ್ಸಾಹದಿಂದ ಪಠ್ಯೇತರ ಪುಸ್ತಕಗಳನ್ನು ಓದಲು ಕುಳಿತಾಗ ಕ್ಲಿಷ್ಟಪದ ಬಂದಾಗಲೆಲ್ಲ ನಿಘಂಟನ್ನು ತೆರೆದರೆ ಕಥೆಯ ಸ್ವಾರಸ್ಯವನ್ನು ಹೀರಿಕೊಳ್ಳುವುದಕ್ಕೆ ತಡೆಹಾಕಿದಂತಾಗುತ್ತದೆ. ಮೊದಲೇ ಕೇಳಿದ್ದ ಕಥೆಯನ್ನು ಪುಸ್ತಕದಲ್ಲಿ ಅನುಸರಿಸುವಷ್ಟು ಭಾಷಾಜ್ಞಾನವಿದ್ದರೆ, ಸಂದರ್ಭ(context)ದಿಂದಾಗಿ ಹೊಸ ಪದಗಳ ಅರ್ಥ ಮಸಕು ಮಸಕಾಗಿಯಾದರೂ ತಿಳಿಯುತ್ತದೆ. ಅದೇ ಪದಗಳು ಅಥವಾ ನುಡಿಗಟ್ಟುಗಳು ಮತ್ತೆ ಎರಡು ಮೂರು ಸಾರಿ ಬರುವುದರೊಳಗೆ ಅರ್ಥ ಖಚಿತವಾಗುತ್ತದೆ. ಮಾತ್ರವಲ್ಲ, ಅವನ್ನು ಹೇಗೆ ಬಳಸಬೇಕು ಯಾವ ಸಂದರ್ಭದಲ್ಲಿ ಅವು ಸ್ವಾಭಾವಿಕವಾಗಿ ಕಾಣುತ್ತದೆ ಎಂಬುದೆಲ್ಲ ತಾನಾಗಿಯೇ ಮನದಟ್ಟಾಗುತ್ತದೆ (ಮೂರ್ತಿರಾವ್, 2011, ಪು: 77)

ಮಾಸ್ತಿಯವರು ಮತ್ತು ಮೂರ್ತಿರಾಯರು ಇಂಗ್ಲಿಷ್ ಕಲಿಯಲು ಬಳಸಿದ ಕ್ರಮದಲ್ಲಿ ಭಿನ್ನತೆಯಿದೆ. ಈ ವಿಷಯದಲ್ಲಿ ಮಧ್ಯಮ ಮಾರ್ಗವನ್ನು ತುಳಿದ ಕವಿ ಕುವೆಂಪುರವರು ತಮ್ಮ ಆತ್ಮಕಥನ ನೆನಪಿನ ದೋಣಿಯಲ್ಲಿ ಕೃತಿಯಲ್ಲಿ ಹೀಗೆ ಹೇಳುತ್ತಾರೆ.

ಇಂಗ್ಲಿಷ್ ಪಠ್ಯಪುಸ್ತಕಗಳನ್ನು ಕೊಂಡುಕೊಂಡ ನನಗೆ ಅವುಗಳನ್ನು ಓದುವವರೆಗೂ ಸಮಾಧಾನವಿಲ್ಲ. ನನಗೆ ಆಗ ತಿಳಿದಿದ್ದ ಇಂಗ್ಲಿಷ್ ಭಾಷೆಯ ಮಟ್ಟ ಅಷ್ಟೇನೂ ಎತ್ತರದ್ದಾಗಿರಲಿಲ್ಲ. ಅರ್ಥವಾಗದ ಪದಗಳನ್ನು ನಿಘಂಟಿನ ಸಹಾಯದಿಂದ ತಿಳಿದೇ ಮುಂದುವರೆಯಬೇಕು ಎಂಬ ಹಠವೇನೊ ಇತ್ತು. ಬಹುಮಟ್ಟಿಗೆ ಹಾಗೆ ಮಾಡುತ್ತಿದ್ದುದರಿಂದಲೇ ನನ್ನ ಇಂಗ್ಲಿಷ್ ಭಾಷೆಯ ಮಟ್ಟ ಇತರ ನನ್ನ ಸ್ನೇಹಿತರ ಮಟ್ಟಕ್ಕಿಂತ ಎತ್ತರವಾಯಿತೆಂದು ತೋರುತ್ತದೆ. ಆದರೂ ಸುಪ್ರಸಿದ್ಧ ಇಂಗ್ಲಿಷ್ ಲೇಖಕರನ್ನು ಓದುವಾಗ ಎಷ್ಟೋ ಪದಗಳು ಅರ್ಥವಾಗುತ್ತಿರಲಿಲ್ಲ. ಎಷ್ಟೋ ನುಡಿಗಟ್ಟುಗಳ ಮರ್ಮ ಹೊಳೆಯುತ್ತಿರಲಿಲ್ಲ. ಎಲ್ಲ ಸಮಯಗಳಲ್ಲೂ ಎಲ್ಲ ಸ್ಥಳಗಳಲ್ಲೂ ನಿಘಂಟು ಎಲ್ಲಿ ಸಿಗಬೇಕು? ಅಲ್ಲದೇ ಸಾಹಿತ್ಯಭಾಗದ ಸ್ವಾರಸ್ಯದಲ್ಲಿ ಲೀನವಾದ ಮನಸ್ಸು ಸ್ವಾರಸ್ಯದಿಂದ ಚ್ಯುತವಾಗಿ ನಿಘಂಟನ್ನು ನೋಡುವಷ್ಟು ಸಹನೆಯೂ ಇರುತ್ತಿರಲಿಲ್ಲ ಅನೇಕ ವೇಳೆ. ಆದ್ದರಿಂದ ಕೆಲವು ಪದಗಳಿಗೆ ಸ್ಪಷ್ಟಾರ್ಥ ತಿಳಿಯದಿದ್ದರೂ ಭಾವ ಹೊಳೆಯುತ್ತಿತ್ತು! (ಕುವೆಂಪು, 1998, ಪು: 125)

ಕೆ.ಟಿ. ಗಟ್ಟಿಯವರ ಆತ್ಮಕಥೆ ತೀರ ಕೃತಿಯಲ್ಲಿ ಕಲಿಕೆಗಾಗಿ ನಿಘಂಟು ಬಳಸುವ ಕುರಿತು ಬೇರೆಯೇ ಬಗೆಯ ಅಭಿಪ್ರಾಯವನ್ನು ಹೊಂದಿದ್ದಾರೆ. ಎಂಟನೇ ತರಗತಿಯ ಪರೀಕ್ಷೆ ಬರೆದು ಎರಡು ವರ್ಷ ಗಾಂಧೀಜಿ ಶಿಕ್ಷಣ ತತ್ವಾಧಾರಿತ ಬುನಾದಿ ಶಿಕ್ಷಕ ತರಬೇತಿಯನ್ನು ಪೂರೈಸಿ ಹದಿನೇಳು ವರ್ಷ ಪ್ರಾಯದಲ್ಲಿ ಪ್ರಾಥಮಿಕ ಶಾಲಾ ಶಿಕ್ಷಕರಾಗಿ ಸೇವೆಗೆ ಸೇರಿದ ಇವರು ಮೂರು ವರ್ಷಗಳ ಸೇವಾನುಭವದ ಬಳಿಕ ಎಸ್.ಎಸ್.ಎಲ್.ಸಿ ಪರೀಕ್ಷೆ ಖಾಸಗಿಯಾಗಿ ಬರೆಯಹೊರಡುತ್ತಾರೆ. ಸ್ವಂತವಾಗಿ ಕಲಿಯುವಾಗ ಆತಂಕವಿರುವುದು ಸಹಜವೇ ಎನ್ನುವ ಇವರು "ಇಂಗ್ಲಿಷಿನ ಕುರಿತಾಗಿ ನನಗಿದ್ದ ಆತಂಕವನ್ನು ವ್ಯಕ್ತಪಡಿಸಿದಾಗ ಆ ಉಪಾಧ್ಯಾಯರು 'ಇಂಗ್ಲಿಷನ್ನು ಇಂಗ್ಲಿಷಿನಲ್ಲೇ ಕಲಿಯಿರಿ' ಎಂದರು. 'ಹೇಗೆ?' ಎಂದು ಕೇಳಿದೆ. ಇಂಗ್ಲಿಷ್-ಕನ್ನಡ ಡಿಕ್ಷ್ನರಿ ಉಪಯೋಗಿಸಬೇಡಿ, ಇಂಗ್ಲಿಷ್-ಇಂಗ್ಲಿಷ್ ಡಿಕ್ಷ್ನರಿ ಉಪಯೊಗಿಸಿ' ಎಂದರು. ಅದೇ ದಿನ ನಾನು ಇಂಗ್ಲಿಷಿಗೊಂದು ಹೊಸ ಬಾಗಿಲು ತೆರೆದೆ. ಹಾಗೆಂದು ಕನ್ನಡದ ಬಾಗಿಲನ್ನು ಮುಚ್ಚಲಾಗಲಿಲ್ಲ." (ಕೆ.ಟಿ. ಗಟ್ಟಿ, 2018, ಪು: 21)

ಬಿಚ್ಚಿದ ಜೋಳಿಗೆಯಲ್ಲಿ ನಾಗಲೋಟಿಮಠರ ಮಾತುಗಳು ಸ್ವಾರಸ್ಯಕರವಾಗಿವೆ. "ಇಂಗ್ಲಿಷ್ ಭಾಷೆಯ 26 ಅಕ್ಷರಗಳನ್ನು ಕಲಿತರೆ ಸಾಕು. ಇಂಗಿಷ್ ಪುಸ್ತಕ ಓದಲು ಬರುತ್ತದೆ ಎಂಬ ಕಲ್ಪನೆ ಇತ್ತು. ನಾನಂತೂ ಬೇಗಬೇಗನೇ ಇಂಗ್ಲಿಷ್ ಅಕ್ಷರಗಳನ್ನು ಕಲಿತ ತತ್‌ಕ್ಷಣ ಊರಿನ ವಾಚನಾಲಯಕ್ಕೆ ಹೋಗಿ ಇಂಗ್ಲಿಷ್ ಪತ್ರಿಕೆಗಳನ್ನು ಮುಂದೆ ಇಟ್ಟುಕೊಂಡು ಓದತೊಡಗಿದೆ. ಗೊಂದಲವೋ ಗೊಂದಲ. ಏನೂ ತಿಳಿಯಲೊಲ್ಲದು. ಮುಂದೆ ಹಿರಿಯರೊಬ್ಬರು ನನಗೆ ತಿಳಿಸಿದರು. ಮೊದಲು ಅಕ್ಷರ ಬರಬೇಕು. ಅನಂತರ ಅವುಗಳನ್ನು ಹೊಂದಿಸಿ ಶಬ್ದ ಬರಬೇಕು. ಶಬ್ದಗಳನ್ನು ಜೋಡಿಸಿ ವಾಕ್ಯ. ಆಗ ಇಂಗ್ಲಿಷ್ ಅರ್ಥವಾಗುವುದು. ಸಪ್ಪೆಮೋರೆ ಹಾಕಿಕೊಂಡು ಮನೆಗೆ ಬಂದೆ" (ನಾಗಲೋಟಿಮಠ, 2003, ಪು: 27)

ಮಾಸ್ತಿಯವರು ಜಿಲ್ಲಾಧಿಕಾರಿಗಳಾಗಿ, ಮೂರ್ತಿರಾಯರು ಆಂಗ್ಲ ಭಾಷಾ ಉಪನ್ಯಾಸಕರಾಗಿ, ಕೆ.ಟಿ. ಗಟ್ಟಿಯವರು ವಿದೇಶದಲ್ಲಿ ಆಂಗ್ಲ ಭಾಷಾ ಬೋಧಕರಾಗಿ ಕರ್ತವ್ಯವನ್ನು ನಿರ್ವಹಿಸಿದ್ದವರು. ಬಾಲ್ಯದಲ್ಲಿ ಇಂಗ್ಲಿಷ್ ಕಲಿಯುವಲ್ಲಿ ಅವರಿಗೆ ಎದುರಾದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಅವರಲ್ಲಿ ಕೆಲವರು ಶಿಕ್ಷಕರು ತಿಳಿಹೇಳಿದ ತಂತ್ರವನ್ನು ಅನುಸರಿಸಿದ್ದಾರೆ. ಇನ್ನು ಕೆಲವರು ತಮ್ಮದೇ ಕಲಿಕಾ ಕ್ರಮಗಳನ್ನು ರೂಪಿಸಿಕೊಂಡಿದ್ದಾರೆ. ಇವರುಗಳು ಕಂಡುಕೊಂಡ ಪರಿಹಾರ ಕ್ರಮಗಳನ್ನು ಪರಿಚಯಿಸುವುದರಿಂದ ಹೊಸನೋಟಗಳ ಅರಿವು ಮೂಡುತ್ತದೆ. ಮುಂದೆ ವೈದ್ಯ ವಿಜ್ಞಾನಿಯಾಗಿ ಪ್ರಸಿದ್ಧಿಯನ್ನು ಪಡೆದ ಸ.ಜ. ನಾಗಲೋಟಿಮಠರು ಕನ್ನಡವನ್ನು ಕಲಿತ ಕ್ರಮದಲ್ಲಿಯೇ ಇಂಗ್ಲಿಷ್

ಅಕ್ಷರಗಳನ್ನು ಕಲಿತ ತಕ್ಷಣವೇ ಆ ಭಾಷಾ ಕಲಿಕೆ ಸಾಧ್ಯ ಎಂಬ ನಿರ್ಧಾರಕ್ಕೆ ಬರುತ್ತಾರೆ. ಈಗ ಅದು ಹಾಸ್ಯಾಸ್ಪದವಾಗಿ ಕಾಣುತ್ತಿದೆ. ಆದರೆ ಬಾಲ್ಯದಲ್ಲಿ ಅವರು ಎದುರಿಸಿದ ಈ ಬಗೆಯ ವಿಶಿಷ್ಟ ಸಂದರ್ಭವೊಂದನ್ನು ನೆನಪಿಟ್ಟುಕೊಂಡು ಯಾವುದೇ ಸಂಕೋಚವಿಲ್ಲದೇ ದಾಖಲಿಸಿರುವುದು ಅವರ ದೊಡ್ಡತನವನ್ನು ಪರಿಚಯಿಸುತ್ತದೆ.

ಟಿ.ಎಸ್. ಸತ್ಯನ್ ಇವರ ಆತ್ಮಕಥೆ ಕಾಲಕ್ಕೆ ಕನ್ನಡಿಯಲ್ಲಿ ಉಲ್ಲೇಖಗೊಂಡಿರುವ ಈ ಘಟನೆ ವಿದ್ಯಾರ್ಥಿಯ ಅಧ್ಯಯನ ಆಸಕ್ತಿ ಕುರಿತಂತೆ ಆಸಕ್ತಿದಾಯಕ ಸಂಗತಿಯೊಂದನ್ನು ತೆರೆದಿಡುತ್ತದೆ. ಶಿಕ್ಷಕರಿಂದ ಶಿಫಾರಸ್ಸು ಪತ್ರವನ್ನು ಪಡೆದುಕೊಂಡು ಗ್ರಂಥಪಾಲಕರಿಂದ, ಇಲ್ಲಸ್ಟ್ರೇಟೆಡ್ ವೀಕ್ಲೀ ಪತ್ರಿಕೆಯ ಆರು ಹಳೆಯ ಸಂಚಿಕೆಗಳನ್ನು ಓದುವುದಕ್ಕಾಗಿ ಸತ್ಯನ್ ಹಾಗೂ ಕೈಲಾಸಂ ಒಟ್ಟಾಗಿ ಪಡೆಯುತ್ತಾರೆ.

ಮೂರು ದಿನದೊಳಗಾಗಿ ಹಿಂದಿರುಗಿಸುವಂತೆ ಲೈಬ್ರೆರಿಯನ್ ಹೇಳಿದ್ದ ಬೆದರಿಕೆಯ ಮಾತು ನಮ್ಮಿಬ್ಬರನ್ನೂ ಪ್ರತಿಕ್ಷಣ ಎಚ್ಚರಿಸುತ್ತಿತ್ತು. ಆರು ಸಂಚಿಕೆಗಳ ಸಂಪೂರ್ಣ ಅವಲೋಕನ ಹುಡುಗಾಟವೇ! ತಕ್ಷಣ ಮತ್ತೊಂದು ಪ್ಲಾನ್ ಹೊಳೆಯಿತು. ನನಗೆ ಹೊಟ್ಟೆನೋವು. ಕೈಲಾಸಂಗೆ ಜ್ವರ. ನಮ್ಮ ಸಂಚನ್ನು ಅರ್ಥಮಾಡಿಕೊಂಡ ಮತ್ತೊಬ್ಬ ಸಹಪಾಠಿಗೆ ದಮ್ಮಯ್ಯಗುಡ್ಡೆ ಹಾಕಿ ಅವನೊಡನೆ ರಜಾಚೀಟಿ ಕಳುಹಿಸಿ ಕೊಟ್ಟೆವು. ಮುಂದಿನ ಮೂರು ದಿನ 'ವೀಕ್ಲಿ' ನಮ್ಮ ಆರಾಧ್ಯ ದೈವವಾಯಿತು. ಹೊಸ ಗೊಂಬೆಗೆ ಮಾರುಹೋದ ಮಗುವಿನಂತೆ ಅಕ್ಷರಶಹ 'ವೀಕ್ಲಿ' ಯ ಪ್ರತಿ ಪುಟವನ್ನೂ ನಾವಿಬ್ಬರೂ ಓದಿಬಿಟ್ಟೆವು. ಬಾಲ ವಿಭಾಗದಲ್ಲಿದ್ದ ಕಥೆಗಳನ್ನೂ ಗಟ್ಟಿ ಮಾಡಿದೆವು. ಗಂಭೀರ ಲೇಖನಗಳನ್ನು ಶಕ್ತಿಮೀರಿ ಅರ್ಥಮಾಡಿಕೊಳ್ಳಲು ಪ್ರಯತ್ನ ಮಾಡಿದೆವು." (ಸತ್ಯನ್ ಟಿ.ಎಸ್., 2003, ಪು: 32)

ಈ ಘಟನೆಯು ಬೆಳೆಯುವ ಕುಡಿ ಮೊಳಕೆಯಲ್ಲಿ ಎಂಬ ನಾನ್ನುಡಿಗೆ ಉದಾಹರಣೆಯಾಗಿದೆ. ಬಾಲ್ಯದ ಈ ಬಗೆಯ ಆಸಕ್ತಿಯಿಂದಾಗಿಯೇ ಮುಂದೆ ಅಂತರಾಷ್ಟ್ರೀಯ ಮಟ್ಟದ ವರದಿಗಾರರಾಗಿ ಟಿ.ಎಸ್.ಸತ್ಯನ್ ಗುರುತಿಸಿಕೊಳ್ಳುತ್ತಾರೆ. ಗ್ರಂಥಾಲಯದ ಪುಸ್ತಕಗಳ ಓದಿನ ಹವ್ಯಾಸವನ್ನು ಬೆಳೆಸಲು ಶಾಲೆಗಳಲ್ಲಿ ಶಿಕ್ಷಕರು ಪ್ರಯತ್ನಶೀಲರಾಗಿದ್ದರು. ಅಂದಿನ ವಿದ್ಯಾರ್ಥಿಗಳು ಮುಂದೆ ವಿಜ್ಞಾನಿಗಳು, ಸಾಹಿತಿಗಳು, ಪತ್ರಕರ್ತರೂ ಆಗಿ ಗುರುತಿಸಿಕೊಳ್ಳುವಲ್ಲಿ ಗ್ರಂಥಾಲಯಗಳ ಬಳಕೆಯ ಬಾಲ್ಯದ ಹುಚ್ಚಿನ ಕಾರಣದಿಂದಾಗಿ ಸಾಧ್ಯವಾಯಿತು ಎನ್ನುವುದಕ್ಕೆ ಆತ್ಮಕಥೆಗಳ ಹಲವಾರು ಉಲ್ಲೇಖಗಳು ಸಾಕ್ಷಿಯಾಗಿವೆ.

ಕನ್ನಡ ಭಾಷೆಯ ಕಲಿಕೆಗೆ ಸಹಕಾರಿಯಾಗುವ ಸಾಂಸ್ಕೃತಿಕ ಅಂಶಗಳು

ಕನ್ನಡದಲ್ಲಿ ಆತ್ಮಕಥೆಗಳನ್ನು ಬರೆದವರಲ್ಲಿ ಅತ್ಯಂತ ಹಿರಿಯರನ್ನಾಗಿ ಆಲೂರು ವೆಂಕಟರಾಯರನ್ನು (ಜನನ 1880) ಗುರುತಿಸಲಾಗಿದೆ. ಅವರ ಆತ್ಮಕಥೆಯ ಹೆಸರು ನನ್ನ ಜೀವನ ಸ್ಮೃತಿಗಳು. ಅವರು ಬಾಲ್ಯದಲ್ಲಿ ಅಮರಕೋಶವನ್ನು ಕಂಠಪಾಠ ಮಾಡಿದ ಕುರಿತು ಹೇಳಿಕೊಳ್ಳುತ್ತಾರೆ. ಐಗಳ ಮಠದಿಂದ ಶಾಲಾ ಶಿಕ್ಷಣಕ್ಕೆ ಪರಿವರ್ತನೆ ಹೊಂದುತ್ತಿದ್ದ ಆ ಕಾಲಘಟ್ಟದಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ಅಮರಕೋಶವನ್ನು ಪೂರ್ಣ ಬಾಯಿಪಾಠ ಮಾಡುವ ಅಭ್ಯಾಸವಿದ್ದುದನ್ನು ಹೇಳಿಕೊಂಡಿದ್ದಾರೆ. ಭಾಷಾ ಉಚ್ಚಾರದ ಶುದ್ಧಿಗಾಗಿ ಅಮರಕೋಶದ ಬಾಯಿಪಾಠ ಬಹಳಷ್ಟು ಸಹಕಾರಿ ಎಂಬುದನ್ನು ಈಗಲೂ ಸಂಶೋಧಕರು ಕುತೂಹಲದಿಂದ ಗಮನಿಸುತ್ತಿದ್ದಾರೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಇವರು ಶಾಲಾ ಪಾಠಗಳಿಗಿಂತ ಹೆಚ್ಚಾಗಿ ಮನೆಯ ವಾತಾವರಣದಿಂದ ಶಿಕ್ಷಣವನ್ನು ಪಡೆದಿರುವ ಬಗ್ಗೆ ಹೀಗೆ ಹೇಳಿಕೊಳ್ಳುತ್ತಾರೆ. “ನಾನು ಶಾಲೆಯಲ್ಲಿ ಏನನ್ನು ಕಲಿತೆ ನೆನಪಿಲ್ಲ. ಅವರು ಪಾಠ ಸಹ ಏನು ಹೇಳಿದರು ಎಂಬುದು ನೆನಪಿಲ್ಲ. ನನಗೆ ಶಾಲೆಯ ಪಾಠ, ಒಂದೂ ಆಗ ಬರದಿದ್ದರೂ 11 -12 ವರುಷದ ವೇಳೆಗೆ ರಾಮಾಯಣ, ಭಾರತ, ಭಾಗವತ ಕಥೆಗಳೆಲ್ಲ ತಿಳಿದವು. ನಮ್ಮ ತಂದೆಯವರ ಪುರಾಣ, ನವರಾತ್ರಿ ರಾಮಾಯಣ ಪಾರಾಯಣ, ದೇವಸ್ಥಾನದ ಹರಿಕಥೆಗಳು ಇವುಗಳೇ ನನ್ನ ಶಾಲೆ” (ಗೊರೂರು, 2011, ಪು: 40) ಸಾಮಾಜಿಕ ಪರಿಸರದಲ್ಲಿ ಲಭ್ಯ ಅವಕಾಶಗಳು ಶಾಲಾ ತರಗತಿಯ ಕಲಿಕೆಗೆ ಪೂರಕವಾಗಿರುತ್ತದೆ ಮತ್ತು ಪರಿಣಾಮಕಾರಿ ಕಲಿಕೆಗೆ ಸಹಕರಿಸುತ್ತವೆ ಎಂಬುದನ್ನು ಗೊರೂರರ ಈ ಮಾತು ಸ್ಪಷ್ಟಪಡಿಸುತ್ತದೆ.

ಭಾಷಾ ಕಲಿಕೆಯ ಸಂದರ್ಭದಲ್ಲಿ ಸಹಪಠ್ಯ ಚಟುವಟಿಕೆಗಳಿಗೆ ಮಹತ್ವದ ಸ್ಥಾನವಿದೆ. ಪಠ್ಯಪುಸ್ತಕಗಳು, ಪಠ್ಯಕ್ರಮಗಳನ್ನು ಮೀರಿ ಅರಿವು ವಿಸ್ತಾರಗೊಳ್ಳಲು ಅವುಗಳು ಅವಕಾಶವನ್ನು ಕಲ್ಪಿಸಿಕೊಡುತ್ತವೆ. ಈ ಕುರಿತು ಶಿಕ್ಷಣದ ಸಿದ್ಧಾಂತಗಳನ್ನು ರೂಪಿಸುವಲ್ಲಿ ಅವಿರತವಾಗಿ ಶ್ರಮಿಸುತ್ತಿರುವ ಡಾ. ಎನ್. ಸುಕುಮಾರ ಗೌಡ ಅವರು ಮಗು ಮನೆಯಿಂದ ಶಾಲೆಗೆ ಎಂಬ ಕೃತಿಯಲ್ಲಿ ಹೀಗೆ ಹೇಳಿದ್ದಾರೆ.

ವಿದ್ಯಾರ್ಥಿಯ ಬದುಕು, ಬುದ್ಧಿ, ಭಾವ ಮತ್ತು ಭಾಷೆ ಇವುಗಳೊಳಗೆ ನಿಕಟ ಬಾಂಧವ್ಯವನ್ನು ಕಂಡುಕೊಂಡು ಅದರ ಬೆಳವಣಿಗೆಗೆ ಅವಕಾಶವನ್ನು ಒದಗಿಸಿ ಪ್ರೋತ್ಸಾಹವನ್ನು ಕೊಡುವುದೇ ಶಾಲಾ ಶಿಕ್ಷಣದ ಮುಖ್ಯ ಗುರಿಯಾಗಿರಬೇಕು. . . . ಶಾಲೆಗಳಲ್ಲಿ ವಿದ್ಯಾರ್ಥಿಗಳ ಜೀವನಾನುಭವ ಮತ್ತು ಭಾಷಾನುಭವಗಳನ್ನು ಜೊತೆಜೊತೆಯಾಗಿ ವೃದ್ಧಿಸಿದಷ್ಟೂ, ಶ್ರೀಮಂತಗೊಳಿಸಿದಷ್ಟೂ ಶೈಕ್ಷಣಿಕವಾಗಿ ಲಾಭದಾಯಕವೇ. ಭಾಷೆಯಲ್ಲಿ ಜೀವಂತಿಕೆ ಇದ್ದರೆ, ಸತ್ವಪೂರ್ಣವಾಗಿದ್ದರೆ, ಕಲಿಕೆಯೂ ಸತ್ವಪೂರ್ಣವಾಗುವುದು. ಮಕ್ಕಳು ಬಳಸಿದ ಭಾಷೆಯಲ್ಲಿ

ಸಹಜ ಅರ್ಥವನ್ನು ಕಾಣಲು ಪ್ರಯತ್ನಿಸದೇ, ಕೇವಲ ಹೊರ ಪದರಿನ ಶುದ್ಧೀಕರಣಕ್ಕೆ ತೊಡಗಿದರೆ ಕಲಿಕೆ ಸೊರಗುವುದು, ಅರ್ಥಹೀನವಾಗುವುದು. ಪಠ್ಯಪುಸ್ತಕಕ್ಕೆ ಅಂಟಿಕೊಂಡು ಪಾಠಮಾಡುವುದರ ಜೊತೆಗೆ ಪಠ್ಯಪೂರಕವಾದ ಹತ್ತು ಹಲವಾರು ಭಾಷಾ ಮತ್ತು ಕಲಿಕೆಯ ಚಟುವಟಿಕೆಗಳಲ್ಲಿ ತೊಡಗಬೇಕಾಗುತ್ತದೆ. (ಸುಕುಮಾರ ಗೌಡ, 2017, ಪು: 96)

ಇಂದಿನ ಹೆಚ್ಚಿನ ಆಂಗ್ಲ ಮಾಧ್ಯಮ ಶಾಲೆಗಳಲ್ಲಿ ಇಂಗ್ಲಿಷ್ ಕೇವಲ ಪರೀಕ್ಷೆ ನಡೆಸುವ ಭಾಷೆಯಾಗಿ ಉಳಿದಿದೆ ಎಂದು ಹೇಳುವ ಸುಕುಮಾರ ಗೌಡರು ವಿದ್ಯಾರ್ಥಿಗಳಲ್ಲಿ ಹೆಚ್ಚಾಗುತ್ತಿರುವ ಭಾಷಾ ದಾರಿದ್ರ್ಯವನ್ನು ಹೊಗಲಾಡಿಸಲು ಶಾಲೆಗಳಲ್ಲಿ ವಿಶೇಷ ಪ್ರಯತ್ನಗಳ ಅಗತ್ಯವಿದೆ ಎಂಬುದನ್ನು ಕಳಕಳಿಯಿಂದ ಹೇಳುತ್ತಾರೆ.

ಕರಾವಳಿ ಭಾಗದಲ್ಲಿ ವಿದ್ಯಾರ್ಥಿಗಳು ಯಕ್ಷಗಾನದ ಪದ್ಯಗಳ ಬಾಯಿಪಾಠದಿಂದ ಕನ್ನಡದಲ್ಲಿ ಶುದ್ಧ ಉಚ್ಚಾರವನ್ನು ಕಲಿತದ್ದು, ಭಾಷಾ ಪ್ರೌಢಿಮೆಯನ್ನು ಗಳಿಸಿರುವುದನ್ನು ಖಚಿತಪಡಿಸುವಲ್ಲಿ ಕೆ.ಟಿ. ಗಟ್ಟಿಯವರ ತೀರ, ಹಿರಿಯಡಕ ಗೋಪಾಲರಾಯರ ಮದ್ದಳೆಯ ಮಾಯಾಲೋಕ ಈ ಆತ್ಮಕಥನಗಳನ್ನು ಉದಾಹರಿಸಬಹುದು. ಕನ್ನಡ ಪಂಡಿತ ಪರಂಪರೆಯಿಂದಾಗಿ ಕನ್ನಡ ಭಾಷಾ ಬೋಧನೆಯ ಗುಣಮಟ್ಟ ಉತ್ತಮವಾಗಿದ್ದ ಉದಾಹರಣೆಯನ್ನು ಶಿವರಾಮ ಕಾರಂತರು ತಮ್ಮ ಆತ್ಮಕಥೆಯಲ್ಲಿ ಹೇಳುವುದಷ್ಟೇ ಅಲ್ಲ; ಪ್ರೌಢಶಾಲಾ ಹಂತದಲ್ಲಿ ತಮಗೆ ಕನ್ನಡ ಬೋಧನೆ ಮಾಡಿದ ಕನ್ನಡ ಪಂಡಿತ ಐರೋಡಿ ಶಿವರಾಮಯ್ಯನವರ ವ್ಯಕ್ತಿಚಿತ್ರವೊಂದನ್ನು ನಿರೂಪಿಸಿದ್ದಾರೆ. (ನೋಡಿ: ಶಿವರಾಮ ಕಾರಂತರ ಲೇಖನಗಳು ಸಂಪುಟ 1 ವ್ಯಕ್ತಿ ಚಿತ್ರಗಳೂ, ವಿಮರ್ಶೆಗಳು. ಸಂ. ಮಾಲಿನಿ ಮಲ್ಯ, ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾಲಯ, 1993) ನಾಟಕಗಳಲ್ಲಿ ಭಾಗವಹಿಸುವ ಅವಕಾಶ ದೊರೆತದ್ದರಿಂದ ತಮ್ಮ ಭಾಷಾ ಪ್ರೌಢಿಮೆಯಲ್ಲಿ ಹೆಚ್ಚಳವಾದುದ್ದನ್ನು ಆತ್ಮಕಥೆಯಲ್ಲಿ ಹೇಳಿಕೊಂಡಿರುವವರು ಆಲೂರು ವೆಂಕಟರಾಯರು, ಬೀಚಿ ಹಾಗೂ ಪ್ರೇಮಾ ಕಾರಂತರು. ಶಾಲೆಗಳಲ್ಲಿ ವಿದ್ಯಾರ್ಥಿಗಳಿಂದ ಸಾಹಿತ್ಯ ಪತ್ರಿಕೆಗಳನ್ನು ಸಿದ್ಧಪಡಿಸುತ್ತಿದ್ದುದರಿಂದ ಸಾಹಿತ್ಯ ಸೃಷ್ಟಿಯಲ್ಲಿ ಆಸಕ್ತಿ ಮೂಡಿದ ಕುರಿತು ಹೇಳಿಕೊಳ್ಳುವವರು ಬಿ.ವಿ. ಕಾರಂತರು, ಗಿರೀಶ ಕಾರ್ನಾಡರು ಮತ್ತು ನಾ.ಡಿಸೋಜ ಅವರು. ಹೀಗೆ ಅಮರಕೋಶದ ಕಂಠಪಾಠ, ನಾಟಕಗಳಲ್ಲಿ ಅಭಿನಯ, ಯಕ್ಷಗಾನದ ವೀಕ್ಷಣೆ, ಶಾಲಾ ಹಸ್ತಪತ್ರಿಕೆಗಳ ರಚನೆ ಇವೇ ಮುಂತಾದ ಅವಕಾಶಗಳು ಭಾಷಾ ಸಾಮರ್ಥ್ಯ ಗಳಿಕೆಗೆ ಉತ್ತಮ ಸಾಧನಗಳಾಗಿರುವುದನ್ನು ಆತ್ಮಕಥೆಗಳು ದೃಢೀಕರಿಸುತ್ತವೆ. ಇಂದೂ ಕೂಡಾ ಭಾಷಾ ಕಲಿಕೆಯನ್ನು ಪರಿಣಾಮಕಾರಿಯಾಗುವ ನಿಟ್ಟಿನಲ್ಲಿ ಅಂತಹ ಚಟುವಟಿಕೆಗಳನ್ನು ಶಾಲೆಗಳಲ್ಲಿ ಸಂಘಟಿಸುವುದರ ಅಗತ್ಯವಿದೆ.

**ಬಾಲ ಸಾಹಿತ್ಯ -ಶಿಶು ಸಾಹಿತ್ಯದ ಸೃಷ್ಟಿ**

ಮಾತೃಭಾಷೆಯ ಶಿಕ್ಷಣವನ್ನು ಜಾರಿಗೊಳಿಸುವಲ್ಲಿ ಆ ಭಾಷೆಯನ್ನು ಕುರಿತಂತೆ ಆ ಭಾಷಿಕರಲ್ಲಿ ಅಭಿಮಾನ ಇರಬೇಕು. ಭಾಷಾ ಕಲಿಕೆಯನ್ನು ಪರಿಣಾಮಕಾರಿಯಾಗಿಸುವಲ್ಲಿ ವಿಪುಲವಾದ ಬಾಲ ಸಾಹಿತ್ಯದ ರಚನೆ ಕೂಡಾ ಅಷ್ಟೇ ಮಹತ್ವದ್ದು. ಇವೆರಡನ್ನೂ ಸಾಧಿಸುವ ಪ್ರಯತ್ನಗಳು ನವೋದಯ ಕಾಲಘಟ್ಟದಲ್ಲಿ ಕನ್ನಡದಲ್ಲಿ ವಿಶೇಷವಾಗಿಯೇ ನಡೆಯಿತು. 'ಕನ್ನಡ ಭಾಷೆ ತಲೆಯೆತ್ತುವ ಬಗ್ಗೆ' ಕನ್ನಡದ ಕಣ್ವ ಬಿ.ಎಂ.ಶ್ರೀ. ಧಾರವಾಡದಲ್ಲಿ ಹೇಳಿದರೆ, ಹುಯಿಲಗೋಳರು 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎಂದು ಹಾಡಿದರು. ಪದವಿ ತರಗತಿಗಳಲ್ಲಿ, ಹಾಗೂ ಸ್ನಾತಕೊತ್ತರ ಶಿಕ್ಷಣ ಕ್ಷೇತ್ರದಲ್ಲಿ ಗಣಿತ, ವಿಜ್ಞಾನ, ವಾಣಿಜ್ಯ ಮತ್ತಿತರ ವಿಷಯಗಳ ಕಲಿಕೆಯನ್ನು ಕನ್ನಡದಲ್ಲಿ ನೀಡುವುದು ಸಾಧ್ಯವಾಗಬೇಕು. ಈ ನಿಟ್ಟಿನಲ್ಲಿ ಪರಾಮರ್ಶನ ಗ್ರಂಥಗಳನ್ನು ಕನ್ನಡಕ್ಕೆ ತರ್ಜುಮೆ ಮಾಡುವ ಕೆಲಸವು ಆದ್ಯತೆಯಲ್ಲಿ ನಡೆಸಲು ಕುವೆಂಪು ನೇತೃತ್ವದ ತಂಡ ನಿರಂತರ ಪ್ರಯತ್ನಶೀಲವಾಗಿತ್ತು. ಅಷ್ಟೇ ಬದ್ಧತೆಯಿಂದ ಶಿಶು ಸಾಹಿತ್ಯವನ್ನು ರಚಿಸುವಲ್ಲಿ ಶ್ರಮಿಸಿದವರಲ್ಲಿ ಪಂಜೆ ಮಂಗೇಶರಾವ್, ಜಿ.ಪಿ. ರಾಜರತ್ನಂ, ಹೊಯಿಸಳ ಮುಂತಾದವರನ್ನು ಪ್ರಮುಖವಾಗಿ ಹೆಸರಿಸಬಹುದು.

ಜಿ.ಪಿ. ರಾಜರತ್ನಂರವರ ಆತ್ಮಕಥೆಯ ಶಿರೋನಾಮೆ ಹತ್ತು ವರುಷ. 1931 ರಲ್ಲಿ ಸ್ನಾತಕೋತ್ತರ ಪದವೀಧರರಾದ ಅವರು ಕೆಲಸ ಸಿಗದಿದ್ದಾಗ ಮಾಸ್ತಿಯವರು ಹೇಳಿದಂತೆ ಪಾಲೀ ಭಾಷೆಯ ಕೆಲವು ಕೃತಿಗಳನ್ನು ಕನ್ನಡಕ್ಕೆ ಭಾಷಾಂತರಿಸುವ ಕೆಲಸವನ್ನು ಮಾಡಿದ್ದರು. ತಂದೆ ಖಾಯಿಲೆ ಬಿದ್ದಾಗ ಬದಲಿ ಶಿಕ್ಷಕರಾಗಿ ಶಾಲೆಯಲ್ಲಿ ದುಡಿದರು. ಮೂರನೇ ತರಗತಿಯ ಪಠ್ಯದಲ್ಲಿ ಹರಿಭಕ್ತಿಸಾರದ ಪದ್ಯಗಳು, 'ದೇವರು ಎಂಬ ವ್ಯಕ್ತಿಯು ಇರುವುದೆ?' ಮುಂತಾದ ಪಾಠಗಳನ್ನು ಕಂಡು ರಾಜರತ್ನಂರವರಿಗೆ ಕನಿಕರ ಹುಟ್ಟಿತು. ಪಠ್ಯಪುಸ್ತಕದ ಪಾಠಗಳು ಅರ್ಥವಾಗಲಿ ಆಗದಿರಲಿ, ಮಾಡಿದ ಶಾಸ್ತ್ರವನ್ನಂತೂ ಮಾಡಿಯೇ ತೀರಬೇಕು. ಇದರ ಜೊತೆಗೆ ಮಕ್ಕಳಿಗೆ ಉಲ್ಲಾಸಕೊಡುವ, ಮಕ್ಕಳನ್ನು ಉತ್ಸಾಹಗೊಳಿಸುವ ಕತೆ ಕವನಗಳನ್ನು ಕೂಡಿಸಬಾರದೇಕೆಎಂಬ ಪ್ರಶ್ನೆಯನ್ನು ಅವರು ಕೇಳಿಕೊಂಡರು.

ಆಗ ಅಲ್ಲಿಯ ಹುಡುಗರಲ್ಲಿಯೇ ಬಳಕೆಯಿರುವ ಶಬ್ದಕೋಶವನ್ನು ಮಾತ್ರ ಬಳಸಿ ಅವರಿಗೆ ಕವನಗಳನ್ನು ಕಟ್ಟಬೇಕೆಂದು ರತ್ನನಿಗೆ ಮನಸ್ಸಾಯಿತು. ಹಾಗೆ ಕಟ್ಟಿದ ಮೊದಲನೇ ಕವನವೇ 'ತುತ್ತೂರಿ' ಅದೇ ಪಟ್ಟಿನಲ್ಲಿ ದಿನಕ್ಕೆ

ಮೂರು ನಾಲ್ಕು ಕವನಗಳಂತೆ ಬಾಲಕರೊಡನೆ ಬಾಲಕನಾಗಿ ಕಟ್ಟುತ್ತ ಮಕ್ಕಳು ಮೆಚ್ಚಿದವುಗಳನ್ನೆಲ್ಲ ಕೂಡಿಸಿ 'ತುತ್ತೂರಿ' ಎಂಬ ಪುಸ್ತಕವನ್ನು ಪ್ರಕಟಿಸಿದ. ಅಂದಿನಿಂದ, ಮಕ್ಕಳಿರುವ ಮನೆಗಳಲ್ಲಿ 'ಬಣ್ಣದ ತಗಡಿನ ತುತ್ತೂರಿ ಕಾಸಿಗೆ ಕೊಂಡನು ಕಸ್ತೂರಿ' ಎಂದು ಹೇಳಿಕೊಂಡು ಕುಣಿದಾಡುವ ಗದ್ದಲ ಕಿವಿಗೆ ಬೀಳದಿದ್ದುದು ಅಪೂರ್ವ (ಜಿ.ಪಿ. ರಾಜರತ್ನಂ, 1972, ಪು: 74)

ಈ ವಿಷಯವನ್ನು ರಾಜರತ್ನಂ ಹೆಮ್ಮೆಯಿಂದ ಆತ್ಮಕಥೆಯಲ್ಲಿ ಉಲ್ಲೇಖಿಸುತ್ತಾರೆ. ಶಿಶು ಸಾಹಿತ್ಯ ರಚನೆಯಲ್ಲಿ ಅವರ ಸೃಷ್ಟಿಶೀಲತೆಯನ್ನು ಹಲವಾರು ವಿಮರ್ಶಕರು ಮುಕ್ತ ಕಂಠದಿಂದ ಶ್ಲಾಘಿಸಿದ್ದಾರೆ.

ಮೊಳಹಳ್ಳಿ ಶಿವರಾಯರು ಪುತ್ತೂರಿನಲ್ಲಿ ಉಪಾಧ್ಯಾಯರ ಸಮ್ಮೇಳನವೊಂದನ್ನು ನಡೆಸಿದಾಗ ಅವರೊಂದಿಗಿದ್ದ ಶಿವರಾಮ ಕಾರಂತರು "ನಿಮ್ಮ ಉಪಾಧ್ಯರ ಸಮ್ಮೇಳನ ಮುಗಿಯಿತಲ್ಲ; ಯಾತಕ್ಕೆ ನಾವು ಶಾಲಾ ಮಕ್ಕಳ ಸಮ್ಮೇಳನ ಮಾಡಬಾರದು?" ಎಂದು ಕೇಳಿದರು. ಅವರ ಒಪ್ಪಿಗೆ ಪಡೆದು 'ಮಕ್ಕಳ ಕೂಟ' ನಡೆಸಲು ಕಾರ್ಯನಿರತರಾದರು. ಮಕ್ಕಳು ಶಿಕ್ಷಕರು ಹೇಳಿಕೊಟ್ಟ ಕಥೆಗಳನ್ನು ಹಿರಿಯರ ಭಾಷೆಯಲ್ಲಿಯೇ ಹೇಳುವುದನ್ನು ಕೇಳಿ 'ಆ ಕಥೆ ಸಾಕು, ನಿನ್ನ ಅಜ್ಜಿ ಕಥೆ ಹೇಳುವ ರೀತಿಯಲ್ಲಿ ಅಥವಾ ನೀನು ನಿನ್ನ ದೋಸ್ತಿಗೆ ಹೇಳುವ ರೀತಿಯಲ್ಲಿ ಹೇಳಿದರೆ ಮಾತ್ರ ಕೇಳುತ್ತೇನೆ, ಇಲ್ಲವಾದರೆ ಬೇಡ' ಎಂದು ನಿಷ್ಠುರವಾಗಿ ಹೇಳಿದರು. ಮುಂದೆ ಮಕ್ಕಳೊಡನೆ 'ನಿಮಗೆ ಗೊತ್ತಿದ್ದ ಹಾಡನ್ನು ಹೇಳಿ' ಎಂದರೆ ಶಾಲೆಯ ಹಾಡುಗಳನ್ನೇ ವಿದ್ಯಾರ್ಥಿಗಳು ಹಾಡಿದಾಗ 'ನಿಮ್ಮ ಸುತ್ತುಮುತ್ತಿನವರು, ಏನಾದರೂ ಹಾಡುವುದಿಲ್ಲವೇ? ಕನ್ನಡವಾದರೆ ಕನ್ನಡ, ತುಳುವಾದರೆ ತುಳು' ಅವುಗಳನ್ನು ಹಾಡಿ ಎಂದರು. ಆಗ ಕೆಲವು ಹುಡುಗರು ಜನಮಾನಸದಲ್ಲಿ ಪ್ರಚಲಿತವಿದ್ದ ಗೀತೆಗಳನ್ನು ಹಾಡಿದರು. ಈ ಬಗೆಯಲ್ಲಿ ಮಕ್ಕಳಲ್ಲಿನ ಸುಪ್ತ ಪ್ರತಿಭೆಗಳನ್ನು ಗುರುತಿಸಲು ಸಾಧ್ಯವಾದದ್ದು, ಪರೋಕ್ಷವಾಗಿ ಜನಪದ ಸಾಹಿತ್ಯವನ್ನು ಜನಪ್ರಿಯಗೊಳಿಸುವ ಸಾಧ್ಯತೆಗಳನ್ನು ತಿಳಿಯಲು ಸಮುದಾಯದಲ್ಲಿ ಈ 'ಮಕ್ಕಳ ಕೂಟ' ದ ಸಂಘಟನೆಯಿಂದ ಸಾಧ್ಯವಾದ ಕುರಿತು ಸ್ಮೃತಿ ಪಟಲದಿಂದ ಎಂಬ ತಮ್ಮ ಕೃತಿಯಲ್ಲಿ ಕೋಟ ಶಿವರಾಮ ಕಾರಂತರು ಹೇಳಿಕೊಂಡಿದ್ದಾರೆ. ಪುತ್ತೂರು ತಾಲೂಕಿನಲ್ಲಿ ಮೊಳಹಳ್ಳಿ ಶಿವರಾಯರಿಂದ ಯಶಸ್ವಿಯಾದ ಈ ಬಗೆಯ 'ಮಕ್ಕಳ ಕೂಟ' ವನ್ನು ಮಂಗಳೂರಿನಲ್ಲಿ ಸಂಘಟಿಸಲು ಪಂಜೆ ಮಂಗೇಶರಾಯರು ಶಿವರಾಮ ಕಾರಂತರನ್ನು ಒಪ್ಪಿಸುತ್ತಾರೆ. ಈ ಸಂಘಟನೆಯ ಸಂಪೂರ್ಣ ವೆಚ್ಚವನ್ನು ಪಂಜೆಯವರೇ ಕ್ರೋಡೀಕರಿಸಿ ನೀಡುತ್ತಾರೆ. ವಿದ್ಯಾರ್ಥಿಗಳ ಶಿಕ್ಷಣದ ಗುಣಮಟ್ಟದ ಅಭಿವೃದ್ಧಿಗಾಗಿ ಅಂದಿನ ಶಿಕ್ಷಣಾಧಿಕಾರಿಯೊಬ್ಬರಲ್ಲಿ ಇದ್ದ ಕಾಳಜಿಯನ್ನು ಈ ಘಟನೆಯು ತಿಳಿಸುತ್ತದೆ.

ಅತಿಥಿಯಾಗಿ ಈ 'ಮಕ್ಕಳ ಕೂಟ' ಕ್ಕೆ ಆಗಮಿಸಿದ್ದ ಜಿ.ಪಿ. ರಾಜರತ್ನಂ ಆ ಕುರಿತು ವಿವರಗಳನ್ನು ಹತ್ತುವರುಷ ದಲ್ಲಿ ವಿಶೇಷವಾಗಿ ದಾಖಲಿಸಿದ್ದಾರೆ. ಕೆಲವರು ಅಂತಹ ಕವನಗಳನ್ನು ಕಟ್ಟಬೇಕೆಂದು ಆಶಿಸಿ ಬರೆಯುವುದಕ್ಕೆ ಕಲಿಸಬೇಕೆಂದು ಕೋರಿದಾಗ ಮಾದರಿಯಾಗಿ ಈ ಚುಟುಕವನ್ನು ನೀಡಿದ್ದಾಗಿ ಹೇಳುತ್ತಾರೆ.

ದೊಡ್ಡ ಪಟ್ಟೆ ಹುಲಿ

ಕಾಡುದಾರಿಯಲಿ

ನಡುಗಿ ನಿಂತು

ಹೇಳಿತಿಂತು

'ಅಯ್ಯೋ ಅಪ್ಪ ಚಳಿ!'

ಈ ಮಾದರಿಯಲ್ಲಿಯೇ 'ಮಕ್ಕಳ ಕೂಟ' ದಲ್ಲಿಯೇ ಹಲವಾರು ಅತ್ಯುತ್ತಮ ಚುಟುಕಗಳನ್ನು ವಿದ್ಯಾರ್ಥಿಗಳು ಸೃಷ್ಟಿ ಮಾಡಿದ್ದನ್ನು ಅವರು ಸ್ಮರಿಸುತ್ತಾರೆ. ಬಾಲ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡಿದ ಸಾಧಕರ ವಿವರಗಳನ್ನು ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ ಇದರ ಬೆಳ್ಳಿ ಹಬ್ಬದ ಪ್ರಕಟಣೆಯ ಭಾಗವಾಗಿ ಸಂತೋಷ ಕುಮಾರ ಗುಲ್ವಾಡಿಯವರ ಸಂಪಾಕತ್ವದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಬಾಲ ಸಾಹಿತ್ಯದ ಮೊದಲಿಗರು ಎಂಬ ಕೃತಿಯನ್ನು ೧೯೯೦ರಲ್ಲಿ ಹೊರತಂದಿದೆ. ಇದರ ಮುನ್ನುಡಿಯನ್ನು ಕೋಟ ಶಿವರಾಮ ಕಾರಂತರು ಬರೆದಿದ್ದಾರೆ. ಬಾಲ ಸಾಹಿತ್ಯವು ಕನ್ನಡದಲ್ಲಿ ಬೆಳೆದು ಬಂದ ಕ್ರಮವನ್ನು ವಿವರಿಸುತ್ತಾ ಭಾಷಾಭಿವೃದ್ಧಿಯಲ್ಲಿ ಇದರ ಅಗತ್ಯವನ್ನು ಕಾರಂತರು ಒತ್ತಿ ಹೇಳಿದ್ದಾರೆ. ಇನ್ನೊಂದು ಮಹತ್ವದ ಸಂಪಾದಿತ ಕೃತಿ ಬೋಳುವಾರು ಮಹಮದ್ ಕುಂಞ್ ಇವರ ತಟ್ಟು ಚಪ್ಪಾಳೆ ಪುಟ್ಟ ಮಗು. ಇದರಲ್ಲಿನ ಮುನ್ನುಡಿಯ ಮಾತುಗಳು ಕೂಡಾ ಕನ್ನಡದಲ್ಲಿ ಬಾಲಸಾಹಿತ್ಯವು ಸಾಗಿ ಬಂದ ವಿವರಗಳನ್ನು ಬಹಳ ವಿಸ್ತಾರವಾಗಿ ಚರ್ಚಿಸುತ್ತದೆ. ಬಾಲಸಾಹಿತ್ಯದಲ್ಲಿ ಕೃಷಿ ಮಾಡಿದವರಲ್ಲಿ ಹಲವಾರು ಮಂದಿ ಶಿಕ್ಷಕರೇ ಆಗಿರುವುದು ಮತ್ತು ಅವರ ಸಾಧನೆಗಳು ಇಂದಿನ ಶಿಕ್ಷಕರಿಗೆ ಹಲವಾರು ಬಗೆಯಲ್ಲಿ ಸ್ಫೂರ್ತಿದಾಯಕವಾಗಿದೆ.

**ಕನ್ನಡದ ಉಳಿವಿಗಾಗಿ ನಡೆದ ಚಳುವಳಿಗಳು**

ಕರಾವಳಿ ಕರ್ನಾಟಕದಲ್ಲಿ ಬಹಳಷ್ಟು ಮಂದಿಯ ಮಾತೃಭಾಷೆ ತುಳು. ತುಳು ಭಾಷೆಯನ್ನು ಪಂಚದ್ರಾವಿಡ ಭಾಷೆಗಳಲ್ಲಿ ಒಂದಾಗಿ ಗುರುತಿಸಲಾಗಿದೆ. ಸಂವಿಧಾನದ ಎಂಟನೇ ಪರಿಚ್ಛೇದದಲ್ಲಿ ತುಳು ಭಾಷೆಯನ್ನು ಸೇರಿಸಬೇಕು ಎನ್ನುವ ಕೂಗು ಇತ್ತೀಚಿನ ದಿನಗಳಲ್ಲಿ ಮುನ್ನೆಲೆಗೆ ಬಂದಿದೆ. ಈ ಕುರಿತು ಹಕ್ಕೊತ್ತಾಯಗಳನ್ನು ಮಂಡಿಸಲು ಚಳುವಳಿಗಳು, ಸಮ್ಮೇಳನಗಳು ನಡೆದಿವೆ. ಆ ಬಗೆಯ ಚಳುವಳಿ, ಸಮ್ಮೇಳನಗಳಲ್ಲಿ ಸಹಸ್ರಾರು ಮಂದಿ ಪಾಲ್ಗೊಂಡಿರುವ ವರದಿ ಪತ್ರಿಕೆಯಲ್ಲಿ ಪ್ರಕಟಗೊಂಡಿದೆ. ಸರಕಾರವು ತುಳು ಅಕಾಡೆಮಿಯ ಸಹಕಾರವನ್ನು ಪಡೆದು ಆರನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ತೃತೀಯ ಭಾಷೆ ತುಳು ಪಠ್ಯಪುಸ್ತಕಗಳನ್ನು ಪ್ರಕಟಿಸಿದೆ. ಅದನ್ನು ದಕ್ಷಿಣ ಕನ್ನಡ, ಉಡುಪಿ ಜಿಲ್ಲೆಗಳಲ್ಲಿ ಆಸಕ್ತ ಶಾಲೆಗಳಲ್ಲಿ ಬೋಧನೆ ಹಾಗೂ ಕಲಿಕೆಗೆ ಅವಕಾಶವನ್ನು ಕಲ್ಪಿಸಿಕೊಡಲಾಗಿದೆ. ಈ ಅವಕಾಶವನ್ನು ಬಳಸಿಕೊಳ್ಳುವ ವಿದ್ಯಾರ್ಥಿಗಳ ಸಂಖ್ಯೆ ಮಾತ್ರ ತೀರಾ ಕಡಿಮೆ ಇದೆ. ಪ್ರಸ್ತುತ ವರ್ಷ ಹತ್ತನೇ ತರಗತಿಯ ಪಬ್ಲಿಕ್ ಪರೀಕ್ಷೆಯಲ್ಲಿ ತುಳು ತೃತೀಯ ಭಾಷೆಯಲ್ಲಿ ನೋಂದಾಯಿಸಿಕೊಂಡಿರುವ ವಿದ್ಯಾರ್ಥಿಗಳ ಸಂಖ್ಯೆ ಒಂದು ನೂರಕ್ಕಿಂತ ಕಡಿಮೆ. ತುಳು ಭಾಷೆಯ ಮೇಲಿನ ಅಭಿಮಾನದಲ್ಲಿ ಸಮ್ಮೇಳನಗಳಲ್ಲಿ ಲಕ್ಷಾಂತರ ಮಂದಿ ಪಾಲ್ಗೊಳ್ಳುವ ಸಂಗತಿಯೇ ಬೇರೆ. ತಮ್ಮ ಮಕ್ಕಳಿಗೆ ಪ್ರೌಢಶಾಲೆಗಳಲ್ಲಿ ಅದೇ ಭಾಷೆಯನ್ನು ಕಲಿಯಲು ಅವಕಾಶ ಕಲ್ಪಿಸಿ ಕೊಡುವುದೇ ಬೇರೆ–ಒಂದಕ್ಕೊಂದು ಸಂಬಂಧವಿಲ್ಲದಂತಹ ಸ್ಥಿತಿ ಭಾಷಾ ಬೋಧನೆಯ ಸಂದರ್ಭದಲ್ಲಿ ಗಮನ ಸೆಳೆಯುತ್ತದೆ.

ಇಂದು ಕನ್ನಡಕ್ಕೆ ಈ ಸ್ಥಿತಿ ಇಲ್ಲ ಎಂದು ಖಂಡಿತವಾಗಿ ಹೇಳಬಹುದು. ಆದರೂ 1941 ರಲ್ಲಿ ಹೈದ್ರಾಬಾದ್‌ನಲ್ಲಿ ಜರುಗಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ಎ.ಆರ್. ಕೃಷ್ಣಶಾಸ್ತ್ರೀ ಅವರ ಭಾಷಣದ ಈ ಸಾಲುಗಳು ಇಂದಿಗೂ ಪ್ರಸ್ತುತ, ಚಿಂತನೀಯ " ..ಏನಾದರೂ ಒಂದು ದುರದೃಷ್ಟದಿಂದ- ಅಂಥ ದುರದೃಷ್ಟ ಬರದಿರಲಿ - ನಮ್ಮದೇಶದಲ್ಲಿ ಬೌದ್ಧಧರ್ಮ ಖಿಲವಾಗಿ ನಷ್ಟವಾಗಿ ಹೋದಂತೆ ಸಂಸ್ಕೃತವೂ ಆಗಿ ಹೋಗುವುದಾದರೆ, ಅದು ಹೊರದೇಶಗಳಲ್ಲಿ ಬದುಕಿರುತ್ತದೆ. ಬಾಳುತ್ತಿರುತ್ತದೆ. ಆದರೆ ಕನ್ನಡ? ಕನ್ನಡಿಗರೇ, ನಿಮ್ಮ ಕನ್ನಡವನ್ನು ಇಂಡಿಯ ದೇಶದ ದಕ್ಷಿಣ ಭಾಗದಲ್ಲಿ ಒಂದು ಅಂಗೈ ಅಗಲ ಬಿಟ್ಟರೆ ಮತ್ತೆಲ್ಲಿಯೂ ನೋಡಲಾರಿರಿ. ನೀವು ಅದನ್ನು ಅಲಕ್ಷ್ಯ ಮಾಡಿದರೆ ಮಿಕ್ಕ ಯಾವ ದೇಶದ ಯಾವ ಜನರೂ ಅದನ್ನು ಎತ್ತಿ ಹಿಡಿಯಲಾರರು. ಅದು ಹೋದರೆ ಹೋಗಲಿ ಎನ್ನುವ ಹಾಗಿದ್ದರೆ, ಈ ಕಡೆ ಬಂಗಾಳ ಕೊಲ್ಲಿ ಇದೆ, ಆ ಕಡೆ ಅರಬ್ಬಿ ಸಮುದ್ರ ಇದೆ; ಗುಡಿಸಿ ಹಾಕಿಬಿಡಿ. ಇತರ

ಭಾಷೆಗಳು ಒತ್ತಿಕೊಂಡು ಬರಲಿ, ಆಕ್ರಮಿಸಿಕೊಳ್ಳಲಿ!" (ಶೇಷಗಿರಿ ರಾವ್ ಎಲ್.ಎಸ್. (ಸಂ), 2013, ಪು: 37) ಎಂತಹ ಧೀಮಂತ ಎಚ್ಚರಿಕೆಯ ನುಡಿಗಳು!

ತ್ರಿಭಾಷಾ ಸೂತ್ರವನ್ನು ಅನುಸರಿಸುವ ಹುಮ್ಮಸ್ಸಿನಲ್ಲಿ ಕರ್ನಾಟಕದ ಪ್ರೌಢಶಾಲಾ ವಿದ್ಯಾರ್ಥಿಗಳು ತಾವು ಕಲಿಯುತ್ತಿದ್ದ ಮೂರು ಭಾಷೆಗಳಲ್ಲಿ ಕನ್ನಡವನ್ನೇ ಕಲಿಯದೇ ಉಳಿಯುವ ಸನ್ನಿವೇಶವೊಂದು ಸೃಷ್ಟಿಗೊಂಡಿತ್ತು. ಅದನ್ನು ಸರಿಪಡಿಸುವ, ಕರ್ನಾಟಕದಲ್ಲಿ ಶಾಲಾ ಶಿಕ್ಷಣವನ್ನು ಪಡೆಯುವ ಪ್ರತಿಯೊಬ್ಬ ವಿದ್ಯಾರ್ಥಿಯೂ ತಪ್ಪದೇ ಪ್ರಥಮ ಭಾಷೆ ಕನ್ನಡವನ್ನು ಕಲಿಯುವಂತೆ ಶಿಫಾರಸ್ಸು ಒಂದನ್ನು ಸಾಹಿತಿ ವಿ.ಕೃ ಗೋಕಾಕ್ ಅವರ ನೇತೃತ್ವದ ಸಮಿತಿಯು ನೀಡಿತ್ತು. ಅದರ ಅನುಷ್ಠಾನದಲ್ಲಿ ಅನಗತ್ಯ ವಿಳಂಬವನ್ನು ಖಂಡಿಸಿ ಜನಸಮಾನ್ಯರು, ಸಾಹಿತಿಗಳು, ಸಿನೆಮಾ ತಾರೆಯರೇ ಮೊದಲಾದವರು ಚಳುವಳಿಗಳನ್ನು ಸಂಘಟಿಸಿದ್ದರು. 1970ರ ದಶಕದಲ್ಲಿ ಕರ್ನಾಟಕದಲ್ಲಿ ಶಾಲಾ ಶಿಕ್ಷಣದಲ್ಲಿ ಕನ್ನಡ ಭಾಷೆಯನ್ನು ಕಡ್ಡಾಯಗೊಳಿಸುವ ಸಲುವಾಗಿ ನಡೆದ ಬಹುದೊಡ್ಡ ಚಳುವಳಿಯಾಗಿ ಗೋಕಾಕ್ ಚಳುವಳಿಯನ್ನು ಗುರುತಿಸಿ ಹಲವಾರು ಆತ್ಮಕಥೆಗಳು ಉಲ್ಲೇಖಿಸಿವೆ. ಇವೆಲ್ಲದರ ಫಲಶ್ರುತಿಯೆಂಬಂತೆ ಇದೀಗ ಕರ್ನಾಟಕ ರಾಜ್ಯದ ಎಲ್ಲ ಶಾಲೆಗಳಲ್ಲಿ ವಿದ್ಯಾರ್ಥಿಗಳು ಒಂದನೇ ತರಗತಿಯಿಂದ ಹತ್ತನೇ ತರಗತಿಯವರೆಗೆ ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ಕನ್ನಡವನ್ನು ಕಲಿಯಬೇಕೆಂದು ಕಡ್ಡಾಯಗೊಳಿಸುವ ಕನ್ನಡ ಭಾಷಾ ಅಧಿನಿಯಮ 2015 ಜಾರಿಗೆ ಬಂದಿದೆ.

ಕನ್ನಡದ ಆತ್ಮಕಥನಗಳು ಮಗುವಿನಲ್ಲಿ ಭಾಷಾ ಪರಿಣತಿಯನ್ನು ಸಿದ್ಧಿಸಲು ಅನುಕೂಲಿಸುವ ಹತ್ತಾರು ವಿಧಾನಗಳ ಬಗ್ಗೆ ಉಲ್ಲೇಖಿಸುತ್ತವೆ. ಇವುಗಳನ್ನು ಹೀಗೆ ಪಟ್ಟಿ ಮಾಡಬಹುದು.

1. ಮಗು ತನ್ನ ಪರಿಸರದಲ್ಲಿರುವ ಹಲವು ಭಾಷೆಗಳನ್ನು ಕಲಿಯಲು ಸಮರ್ಥವಾಗಿರುತ್ತದೆ.

2. ಭಾಷಾ ಕಲಿಕೆಯು ಗಟ್ಟಿಗೊಳ್ಳಲು ಶಾಲೆಯ ಮತ್ತು ಪರಿಸರದಲ್ಲಿನ ಭಾಷಾ ವಾತಾವರಣ ಅತ್ಯಂತ ಮುಖ್ಯವಾಗಿರುತ್ತದೆ.

3. ಮಗುವು ತಪ್ಪಿಲ್ಲದೇ ಓದಲು, ಸುಂದರವಾದ ಅಕ್ಷರಗಳನ್ನು ಬರೆಯಲು ಅನುಕೂಲಿಸುವ ಸಲುವಾಗಿ ಹತ್ತಾರು ಬೋಧನಾ ತಂತ್ರಗಳನ್ನು ಶಿಕ್ಷಕರು ಬಳಸಬೇಕು.

4. ಕಲಿಕೆಗೆ ಸಂಬಂಧಿಸಿದಂತೆ ಕೆಲವು ಶಿಕ್ಷಕರ ಕೆಲವು ಚಿಕ್ಕ ಪುಟ್ಟ ಪ್ರಯೋಗಗಳು ಕೂಡ ವಿದ್ಯಾರ್ಥಿಗಳ ಬದುಕಿನಲ್ಲಿ ಮಹತ್ವದ ತಿರುವನ್ನು ಉಂಟುಮಾಡುತ್ತದೆ.

5. ಸೂಕ್ತ ವಾತಾವರಣವಿಲ್ಲದೇ ಇದ್ದಲ್ಲಿ ದ್ವಿತೀಯ ಭಾಷೆ-ಇಂಗ್ಲಿಷ್ ಕಲಿಯುವುದು ಕಷ್ಟ. ಈ ಭಾಷೆಯನ್ನು ಕಲಿಯಲಾಗದೇ ಶಿಕ್ಷಣದಲ್ಲಿ ಹಿಂದುಳಿದಿರುವ ವಿದ್ಯಾರ್ಥಿಗಳಿಗೆ ಸೂಕ್ತ ಪರಿಹಾರ ಬೋಧನೆಗೆ ಅವಕಾಶಗಳನ್ನು ಕಲ್ಪಿಸಿ ನೀಡಬೇಕು.

6. ಪರಿಸರದಲ್ಲಿನ ಯಕ್ಷಗಾನ, ನಾಟಕ, ಗೊಂಬೆಯಾಟ, ದೇವಸ್ಥಾನದ ಹರಿಕಥೆ - ಪುರಾಣ ಶ್ರವಣ ಇವುಗಳು ಕೂಡಾ ಭಾಷಾ ಕಲಿಕೆಗೆ ಸಹಕಾರಿಯಾಗುತ್ತದೆ. ತನ್ಮೂಲಕ ಸಾಂಸ್ಕೃತಿಕ ಬಳುವಳಿಯನ್ನು ಮುಂದಿನ ಜನಾಂಗಕ್ಕೆ ಪರಿಚಯಿಸುವುದು ಕೂಡಾ ಸಾಧ್ಯವಾಗುತ್ತದೆ.

7. ಶಾಲಾ ವಿದ್ಯಾರ್ಥಿಗಳಲ್ಲಿ ಗ್ರಂಥಾಲಯದ ಬಳಕೆಯನ್ನು ಉತ್ತೇಜಿಸಬೇಕು. ಅವರು ಲೇಖನಗಳನ್ನು ಕಥೆ, ಕವನಗಳನ್ನು ಬರೆಯಲು ಪ್ರೋತ್ಸಾಹಿಸಬೇಕು. ಈ ಬಗೆಯ ಚಟುವಟಿಕೆಗಳು ನಕಲು ಮಾಡುವ ಕ್ರಮಗಳಾಗದಂತೆ ಎಚ್ಚರವನ್ನು ವಹಿಸಬೇಕು.

8. ಸೂಕ್ತ ತಾತ್ವಿಕ ಚಿಂತನೆ ಹಾಗೂ ಸಂಪೂರ್ಣ ಸಿದ್ಧತೆಯೊಂದಿಗೆ ನಡೆಯುವ 'ಮಕ್ಕಳ ಕೂಟ' ದಂತಹ ಚಟುವಟಿಕೆಗಳ ಮೂಲಕ ವಿದ್ಯಾರ್ಥಿಗಳಲ್ಲಿ ಭಾಷಾ ಕಲಿಕೆಯನ್ನು ಆನಂದದಾಯಕ ಪ್ರಕ್ರಿಯೆಯನ್ನಾಗಿಸಬಹುದು.

9. ಶಿಶುಗೀತೆಗಳು, ಮಕ್ಕಳಿಗಾಗಿ ಸಾಹಿತ್ಯ ರಚನೆ ವಿಪುಲವಾಗಿ ನಡೆಯಬೇಕು. ಇಂತಹ ಸಾಹಿತ್ಯ ರಚನೆಯಲ್ಲಿ ಅನುಭವಿ ಶಾಲಾ ಶಿಕ್ಷಕರ ಕೊಡುಗೆ ಇರಬೇಕು.

10. ಮಾತೃಭಾಷಾ (ಪ್ರಾದೇಶಿಕ ಭಾಷಾ) ಮಾಧ್ಯಮದ ಶಿಕ್ಷಣವು ಮಗುವಿನ ಕಲಿಕೆಗೆ ಅತ್ಯಂತ ಉಪಯುಕ್ತವಾದದ್ದು. ಇದನ್ನು ಪ್ರಾಥಮಿಕ ಹಂತದಲ್ಲಿ ಕಡ್ಡಾಯಗೊಳಿಸುವ ಸಲುವಾಗಿ ಸೂಕ್ತ ಸಾಂವಿಧಾನಿಕ ಪ್ರಕ್ರಿಯೆಗಳು ರೂಪುಗೊಳ್ಳಬೇಕು.

ಸೋವಿಯತ್ ದೇಶದ ಸುಪ್ರಸಿದ್ಧ ಮನೋವಿಜ್ಞಾನಿ ವೈಗೋಸ್ಕಿಯವರ ಅಭಿಪ್ರಾಯದಂತೆ 'ಶಾಲೆ ಆರಂಭಿಸುವ ಮೊದಲು ಮಗುವಿಗೆ ಗೊತ್ತಿರುವುದು ಮಾತು (native ability). ಮಾತು ಭಾಷೆಯಾಗಿ ಬೆಳೆಯ ಬೇಕಾದುದು ಶಾಲೆಯಲ್ಲಿ.'

ಈ ಹಿನ್ನೆಲೆಯಲ್ಲಿ ಭಾಷಾ ಕಲಿಕೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂದರ್ಭದಲ್ಲಿ ಭಾಷೆಯ ವೈವಿಧ್ಯಮಯ ಕಾರ್ಯವ್ಯಾಪ್ತಿಯ ಕುರಿತು ಮಗು ಮನೆಯಿಂದ ಶಾಲೆಗೆ ಕೃತಿಯ ಈ ಮಾತುಗಳು ಮಹತ್ವವನ್ನು ಪಡೆಯುತ್ತವೆ. "ಭಾಷೆ ಮುಖ್ಯವಾಗಿ ಅಂತರ ವ್ಯಕ್ತಿ ಸಂವಹನ ಮಾಧ್ಯಮವಾದರೂ ಸಂವಹನವೊಂದೇ ಭಾಷೆಯ ಕಾರ್ಯವಲ್ಲ. ಇತರ ಬೌದ್ಧಿಕ ಕ್ರಿಯೆಗಳಾದ ವಿಚಾರ(reason), ತರ್ಕ(argument), ಊಹನೆ (imagination), ಕಲ್ಪನೆ (conceptualization), ವಿಷಯಗಳ ನಿರೂಪಣೆ (narration), ವರ್ಣನೆ (description), ವಿವರಣೆ (explanation) ಇವೆಲ್ಲ ಕಲಿಕೆಯಲ್ಲಿ ಸೇರಿರುವುದು. ಆದುದರಿಂದ ಕಲಿಕೆಗೆ ಸಂಬಂಧಿಸಿದಾಗ ಭಾಷೆಯ ಕಾರ್ಯವ್ಯಾಪ್ತಿ ಹೆಚ್ಚಾಗುವುದು." (ಸುಕುಮಾರ ಗೌಡ, 2017, ಪು: 95)

ಭಾಷಾ ಕಲಿಕೆಯ ಸಂದರ್ಭದಲ್ಲಿ ಗಮನಿಸಬೇಕಾಗಿರುವ ಮಹತ್ವದ ಅಂಶಗಳ ಕುರಿತು ಶಿಕ್ಷಕರು, ಪೋಷಕರು, ಪ್ರಶಿಕ್ಷಣಾರ್ಥಿಗಳು ಹಾಗೂ ವಿದ್ಯಾರ್ಥಿಗಳಲ್ಲಿ ಅರಿವು ಮೂಡಿಸುವ ಮಾತುಗಳು ಆತ್ಮಕಥೆಗಳಲ್ಲಿ ವಿಪುಲವಾಗಿ ದೊರಕುತ್ತದೆ. ಮಗುವಿನ ಬುದ್ಧಿ ಮತ್ತು ಭಾಷೆ ಒಂದಕ್ಕೊಂದು ಹಾಸುಹೊಕ್ಕಾಗಿ ಪರಸ್ಪರ ಅವಲಂಬಿಗಳಾಗಿಯೇ ಬೆಳೆಯಲು ಸೂಕ್ತ ಅವಕಾಶಗಳನ್ನು ಶಾಲೆಗಳಲ್ಲಿ ಕಲ್ಪಿಸಿ ಕೊಡಲು ಅವಶ್ಯಕವಾದ ಚಟುವಟಿಕೆಗಳನ್ನು ರೂಪಿಸಿಕೊಳ್ಳಲು ದಾರಿಯೊಂದು ಆತ್ಮಕಥೆಗಳ ಅಧ್ಯಯನದಿಂದ ಗೋಚರಿಸುತ್ತದೆ. ಗುಣಾತ್ಮಕ ಶಿಕ್ಷಣದ ಭಾಗವಾಗಿ ಪರಿಣಾಮಕಾರಿ ಭಾಷಾ ಕಲಿಕೆಯನ್ನು ಮಗುವಿನಲ್ಲಿ ಸಾಧ್ಯವಾಗಿಸುವಲ್ಲಿ ಶಿಕ್ಷಕರ ಪಾತ್ರದ ಕುರಿತು ಹೊಸ ಹೊಳವುಗಳು ಆತ್ಮಕಥೆಗಳ ಅಧ್ಯಯನದಿಂದ ಲಭಿಸುತ್ತವೆ.

ಮುಂದಿನ ಜನಾಂಗಕ್ಕೆ ದಾರಿದೀಪವಾಗಲಿ ಎಂಬ ಆಶಯದೊಂದಿಗೆ ಜೀವನದಲ್ಲಿ ಸಾಧನೆಯನ್ನು ಮಾಡಿ ಪ್ರಸಿದ್ಧಿ ಪಡೆದ ಮಹನೀಯರುಗಳು ಆತ್ಮಕಥೆಗಳನ್ನು ಬರೆದಿದ್ದಾರೆ. ಜೀವನದಲ್ಲಿ ಮಹತ್ವದ ಮೈಲಿಗಲ್ಲಾಗಿರುವ ಶಾಲಾ ಶಿಕ್ಷಣದ ಪ್ರಭಾವಗಳನ್ನು ಅವರಲ್ಲಿ ಕೆಲವರಾದರೂ ವಿಶಿಷ್ಟವಾಗಿ ದಾಖಲಿದ್ದಾರೆ. ಶಿಕ್ಷಕರ ಶಿಕ್ಷಣದ (ಡಿ.ಇಡಿ., ಬಿ.ಇಡಿ. ಮತ್ತು ಎಂ.ಇಡಿ.) ಹಂತಗಳಲ್ಲಿ ಪ್ರಶಿಕ್ಷಣಾರ್ಥಿಗಳಿಗೆ ಆತ್ಮಕಥೆಗಳ ಅಧ್ಯಯನದ ಚಟುವಟಿಕೆಯನ್ನು

ಪಠ್ಯಕ್ರಮದಲ್ಲಿ ಕಡ್ಡಾಯಗೊಳಿಸಬೇಕು. ಪ್ರಶಿಕ್ಷಣಾರ್ಥಿಗಳು ತಾವು ಶಿಕ್ಷಕ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳಲು ಪ್ರೇರಣೆಯನ್ನು ಒದಗಿಸಿದ ಸಂದರ್ಭ ಮತ್ತು ಸನ್ನಿವೇಶಗಳನ್ನು ಬರೆದು ಪ್ರಸ್ತುತ ಪಡಿಸುವುದು ಕೂಡಾ ಸಾಧ್ಯವಾಗಬೇಕು. ಸೇವಾನಿರತ ಶಿಕ್ಷಕರ ತರಬೇತಿಗಳಲ್ಲಿ ಕೂಡಾ ಆತ್ಮಕಥೆಗಳ ಅಧ್ಯಯನಕ್ಕೆ ಅವಕಾಶಗಳನ್ನು ಕಲ್ಪಿಸಿ ನೀಡಬೇಕು. ಒಟ್ಟಾರೆಯಾಗಿ ಪ್ರತಿಯೊಂದು ಮಗುವು ಭಿನ್ನವಾಗಿ ಕಲಿಯುತ್ತದೆ ಎಂಬ ಸಿದ್ಧಾಂತವನ್ನು ಆತ್ಮಕಥೆಗಳ ಅಧ್ಯಯನವು ಪುಷ್ಟೀಕರಿಸುತ್ತದೆ. ಭಾಷಾ ಕಲಿಕೆಯನ್ನು ಇನ್ನಷ್ಟು ಪರಿಣಾಮಕಾರಿಯಾಗಿಸುವಲ್ಲಿ, ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಉಳಿಸಿಕೊಳ್ಳುವಲ್ಲಿ ಶಾಲೆ ಹಾಗೂ ಸಮಾಜದಲ್ಲಿ ಹತ್ತಾರು ಆಚರಣೆಗಳನ್ನು ಉಳಿಸಿ ಬೆಳೆಸಬೇಕಾಗಿರುವ ಮಹತ್ವದ ಕುರಿತು ಆತ್ಮಕಥೆಗಳು ಬೊಟ್ಟು ಮಾಡುತ್ತಿವೆ.

ಗ್ರಂಥಋಣ


1. **ಆಲೂರು ವೆಂಕಟರಾಯ, 1973, ನನ್ನ ಜೀವನ ಸ್ಮೃತಿಗಳು, ಮನೋಹರ ಗ್ರಂಥಮಾಲೆ, ಧಾರವಾಡ**

2. **ಕಡಿದಾಳು ಶಾಮಣ್ಣ, 2015, ಕಾಡತೊರೆಯ ಜಾಡು ನಿರೂ:ಅಕ್ಷತಾ, ಅಭಿನವ, ಬೆಂಗಳೂರು**

3. **ಕಯ್ಯಾರ ಕಿಞ್ಞಣ್ಣ ರೈ, 1995, ದುಡಿತವೇ ನನ್ನ ದೇವರು, ಕಿಞ್ಞಣ್ಣ ರೈ ಅಭಿನಂದನ ಸಮಿತಿ ಬೆಂಗಳೂರು**

4. **ಕುವೆಂಪು, 1980, ನೆನಪಿನ ದೋಣಿಯಲ್ಲಿ, ಕುವೆಂಪು ವಿದ್ಯಾವರ್ಧಕ ಟ್ರಸ್ಟ್, ಮೈಸೂರು**

5. **ಕೆ.ಟಿ.ಗಟ್ಟಿ, 2018, ತೀರ ,ಅಂಕಿತ ಪ್ರಕಾಶನ, ಬೆಂಗಳೂರು**

6. **ಕೃಷ್ಣಶಾಸ್ತ್ರಿ ಬೆಳಗೆರೆ, 2007, ಮರೆಯಲಾದೀತೆ..?, ನಿರೂ: ನ. ರವಿಕುಮಾರ, ಅಭಿನವ, ಬೆಂಗಳೂರು**

7. **ಗೊರೂರು ರಾಮಸ್ವಾಮಿ ಅಯ್ಯಂಗಾರ್, 2011, ಗೊರೂರು ಅವರ ಬಾಲ್ಯದ ಆತ್ಮಕಥೆ, ಐಬಿಎಚ್ ಪ್ರಕಾಶನ, ಬೆಂಗಳೂರು**

8. ಗಾಂಧಿ ಮೋ.ಕ., 1995, ನನ್ನ ಆತ್ಮಕಥೆ ಅಥವಾ ನನ್ನ ಸತ್ಯಾನ್ವೇಷಣೆ, ಅನು: ಗೊರೂರು ರಾಮಸ್ವಾಮಿ ಅಯ್ಯಂಗಾರ್, ಗಾಂಧೀ ಸ್ಮಾರಕ ನಿಧಿ, ಬೆಂಗಳೂರು

9. ನರಸಿಂಹಯ್ಯ ಎಚ್., 2015, ಹೋರಾಟದ ಹಾದಿ, ಅಭಿನವ, ಬೆಂಗಳೂರು

10. ನಾಗಲೋಟಿಮಠ, 2003, ಬಿಚ್ಚಿದ ಜೋಳಿಗೆ, ಅತ್ರಿಬುಕ್ ಹೌಸ್, ಮಂಗಳೂರು

11. ಪೆರ್ಲ ಕೃಷ್ಣಭಟ್, 1994, ಬದುಕಿ ಫಲವೇನು?, ಸಾಹಿತ್ಯ ವೇದಿಕೆ, ಪೆರ್ಲ, ಕಾಸರಗೋಡು ಜಿಲ್ಲೆ

12. ಪ್ರೇಮಾಕಾರಂತ, 2010, ಸೋಲಿಸಬೇಡ ಗೆಲಿಸಯ್ಯ, ಮನೋಹರ ಗ್ರಂಥಮಾಲಾ, ಧಾರವಾಡ

13. ಬೀಚಿ, 1976, ನನ್ನ ಭಯಾಗ್ರಫಿ, ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು

14. ಬೋಳುವಾರು ಮಹಮದ್ ಕುಂಞ್ (ಸಂ) 1991, ತಟ್ಟು ಚಪ್ಪಾಳೆ ಪುಟ್ಟ ಮಗು, ದಿವ್ಯಾ ಪ್ರಕಾಶನ, ಬೆಂಗಳೂರು

15. ಮಹಾಬಲೇಶ್ವರ ರಾವ್, 2019, ಶಿಕ್ಷಣದಲ್ಲಿ ಭಾಷೆ ಮತ್ತು ಮಾಧ್ಯಮದ ಸಮಸ್ಯೆಗಳು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

16. ಮಹಾಬಲೇಶ್ವರ ರಾವ್, 2014, ಮೆಕಾಲೆಯ ಮಕ್ಕಳು, ನವಕರ್ನಾಟಕ ಪ್ರಕಾಶನ, ಬೆಂಗಳೂರು

17. ಮಾಸ್ತಿ ವೆಂಕಟೇಶ ಅಯ್ಯಂಗಾರ್, 2008, ಭಾವ ಭಾಗ 1, 2 ಮತ್ತು 3, ಜೀವನ ಕಾರ್ಯಾಲಯ ಟ್ರಸ್ಟ್ ಬೆಂಗಳೂರು

18. ಮೂರ್ತಿರಾವ್ ಎ.ಎನ್., 2011, ಸಂಜೆಗಣ್ಣಿನ ಹಿನ್ನೋಟ, ಡಿವಿಕೆ ಮೂರ್ತಿ, ಮೈಸೂರು

19. ರವೀಂದ್ರನಾಥ ಠಾಕೂರ್, 2012, ಆತ್ಮಕಥೆ, ಅನು: ಸೂರ್ಯನಾರಾಯಣ ರಾವ್ ಎಸ್. ಸುಪ್ರಕಾಶಿನಿ ಪಬ್ಲಿಕೇಷನ್ಸ್, ಬೆಂಗಳೂರು

20. ರಾಜರತ್ನಂ ಜಿ.ಪಿ., 1972, ಹತ್ತು ವರುಷ, ವಿದೇಹ ಪ್ರಕಾಶನ ಬೆಂಗಳೂರು

21. ಶಿವರಾಮ ಕಾರಂತ, 2002, ಹುಚ್ಚುಮನಸ್ಸಿನ ಹತ್ತುಮುಖಗಳು, ರಾಜಲಕ್ಷ್ಮಿ ಪ್ರಕಾಶನ ಬೆಂಗಳೂರು

22. ಶಿವರಾಮ ಕಾರಂತ, 1977, ಸ್ಮೃತಿ ಪಟಲದಿಂದ (ಭಾಗ 1,2 ಮತ್ತು 3), ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು

23. ಶೇಷಗಿರಿ ರಾವ್ ಎಲ್.ಎಸ್. (ಸಂ), 2013, ಎ.ಆರ್. ಕೃಷ್ಣಶಾಸ್ತ್ರೀ ಅವರ ಬೆಲೆಬಾಳುವ ಬರಹಗಳು, ವಸಂತ ಪ್ರಕಾಶನ, ಬೆಂಗಳೂರು

24. ಸತ್ಯನ್ ಟಿ.ಎಸ್., 2003, ಕಾಲಕ್ಕೆ ಕನ್ನಡಿ, ಪ್ರಿಸಂ ಬುಕ್ಸ್, ಬೆಂಗಳೂರು

25. ಸಂತೋಷಕುಮಾರ ಗುಲ್ವಾಡಿ.(ಸಂ), 1990, ದಕ್ಷಿಣಕನ್ನಡ ಜಿಲ್ಲೆಯ ಬಾಲಸಾಹಿತ್ಯದ ಮೊದಲಿಗರು, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ (ಬೆಳ್ಳಿಹಬ್ಬದ ಪ್ರಕಟಣೆ)

26. ಸುಕುಮಾರಗೌಡ, 2015, ಮಗು ಮನೆಯಿಂದ ಶಾಲೆಗೆ, ಶಿಕ್ಷಣ ಅಧ್ಯಯನ ಕೇಂದ್ರ, ಪುತ್ತೂರು

27. ಕನ್ನಡ ಭಾಷಾ ಆಧಿನಿಯಮ 2015

http://www.schooleducation.kar.nic.in/pdffiles/LanguagePolicy2017.pdf

--000--